# ಅಧ್ಯಾತ್ಮಪ್ರಕಾಶ



'ಏತಜ್ಜ್ಞೇಯಂ' — ‘ एतज्ज्ञेयं नित्यमेवाऽऽत्मसंस्थं नातःपरं वेदितव्यं हि किञ्चित्

ಸಂಪುಟ ೫೦ ಮೇ ೧೯೮೧ ಸಂಚಿಕೆ ೯

## ವಿಷಯಗಳು



ಹೊಸವರ್ಷಕ್ಕೆ ಪತ್ರಿಕೆಯ ಚಂದಾ

ರೂ. ೧೦-೦೦

ಪೋಷಕರಿಗೆ ರೂ. ೧೫-೦೦

ಮಹಾಪೋಷಕರಿಗೆ ರೂ. ೧೦೧=

ಮತ್ತು ಮೇಲೆ



ಹೆಚ್ಚು ಜನ
ಚಂದಾದಾರರಾಗಿ
ಪ್ರೋತ್ಸಾಹಿಸಿರಿ.

ಪತ್ರಿಕೆಯ ಸಂಪಾದಕ ಮತ್ತು ಪ್ರಕಾಶಕ :

ಅಧ್ಯಾತ್ಮವಿದ್ಯಾಪ್ರವೀಣ ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ,
ಅಧ್ಯಾತ್ಮಪ್ರಕಾಶಕಾರ್ಯಾಲಯ, ಹೊಳೆನರಸೀಪುರ-573211

May 1981 

# ಉಪಕಾರಸ್ಮರಣೆ

**ಪತ್ರಿಕೆಗೆ ನೂತನ ಮಹಾಪೋಷಕರುಗಳು :** ಶ್ರೀಯುತರುಗಳಾದ ನಂ. M.P. 507. ಎಸ್. ಆರ್.ಎ. ಸ್ವಾಮಿಯವರು, ಬೆಂಗಳೂರು; 508. ಎಸ್. ರಾಧಾಕೃಷ್ಣರವರು, ಬೆಂಗಳೂರು ; 509. ಕೃಷ್ಣಕೇದಾರತಂತಿಯಾ-ರವರು, ಬೆಂಗಳೂರು ; 510. ಬಿ. ಗೋಪಾಲಯ್ಯನವರು, ಬೆಂಗಳೂರು ; 511. ಎ. ಎನ್. ನಾರಾಯಣಮೂರ್ತಿಯವರು, ಬೆಂಗಳೂರು ; 512. ಕೆ. ಶಿವಶಂಕರ್‌ರವರು, ಶಿವಮೊಗ್ಗ ; 513. ಪಿ. ಶ್ರೀರಾಮಶೆಟ್ಟರು, ಮೈಸೂರು ; 514. ಎಲ್. ನಾರಾಯಣರಾವ್, ಎಂಡ್ ಬ್ರದರ್ಸ್, ಮೈಸೂರು ; 515. ಕೆ. ಎನ್. ದತ್ತಾತ್ರಿಯವರು, ಅರಸೀಕೆರೆ ; 516. ಶ್ರೀಮತಿ ರತ್ನಾ ಪಟ್ಟಾಭಿಯವರು, ಬೆಂಗಳೂರು; 517. ಕಬೀರನಾಥ ಸ್ವಾಮೀಜಿಯವರ ಬ್ರಹ್ಮವಿದ್ಯಾಶ್ರಮ, ಬೆಂಗಳೂರು ; 518. ಓ. ಸುರೇಶ್‌ರವರು, ಮದನಪಲ್ಲಿ; 519. ಎಸ್. ಶ್ರೀರಾಮ್ ಎಂಡ್ ಸನ್ಸ್‌ರವರು, ಬೆಂಗಳೂರು; 520. ಎಂ. ಆರ್. ರಾಮಕೃಷ್ಣಯ್ಯಂಗಾರ್ಯರು, ಬೆಂಗಳೂರು ; 521. ಎ. ಪಿ. ಸುಬ್ರಹ್ಮಣ್ಯರವರು, ಬೆಂಗಳೂರು ; 522. ಬಿ. ಎಸ್. ನಂಜಪ್ಪನವರು, ಬೆಂಗಳೂರು 523. ಎ. ಎನ್. ಸುಬ್ಬಸ್ವಾಮಿಯವರು, ಬೆಂಗಳೂರು ; 524. ಘಂಟಿ ಹುಚ್ಚಣ್ಣ ಎಂಡ್ ಸನ್ಸ್‌ರವರು, ಬೆಂಗಳೂರು ; 525. ಸಿ. ಕೆ. ವಿಠಲ್‌ರವರು, ಬೆಂಗಳೂರು ; 526. ಡಿ. ಮಲ್ಲಿಕಾರ್ಜುನರಾವ್‌ರವರು, ಬೆಂಗಳೂರು ; 527. ಇ. ಡಿ. ಸುಂದರರಾಜ್‌ರವರು, ಬೆಂಗಳೂರು ; 528. ಎನ್. ಡಿ. ಪ್ರಸಾದ್‌ರವರು, ಬೆಂಗಳೂರು ; 529. ಶ್ರೀಮತಿ ಎಂ. ವಿ. ಹಿತೈಷಿಣಿರವರು, ಬೆಂಗಳೂರು ; 530. ಟಿ. ಎಸ್. ಕಪಿನೀಪತಯ್ಯನವರು, ಬೆಂಗಳೂರು ; 531. ಹೆಚ್. ಕೆ. ಸುಂದರಮೂರ್ತಿಯವರು, ಬೆಂಗಳೂರು– ಈ ಮಹಾಶಯರುಗಳು ರೂ. ೧೦೧ ರಂತೆ ಮಹಾಪೋಷಣದ್ರವ್ಯವನ್ನು ಕೊಟ್ಟು ಪತ್ರಿಕೆಯನ್ನು ಪ್ರೋತ್ಸಾಹಿಸಿದ್ದಾರೆ.

**೫೦ನೆಯ ಸಂಪುಟಕ್ಕೆ ಪೋಷಕಮಹಾಶಯರುಗಳು :** ಶ್ರೀಗಳಾದ ಚಂದನಂ. 459. ಬಿ. ಸೀತಾರಾಮಯ್ಯನವರು, ಬೆಂಗಳೂರು; 513. ಕೆ. ಕಾಶೀರಾಯರು, ಚಿಕ್ಕಮಗಳೂರು ; 518. ಸಿ. ವಿ. ನಾರಣಪ್ಪರವರು, ತಿಪಟೂರು ; ಈ ಮಹಾಶಯರುಗಳು ರೂ. ೧೫ ರಂತೆ ಪೋಷಣದ್ರವ್ಯವನ್ನು ಕೊಟ್ಟು ಪ್ರೋತ್ಸಾಹಿಸಿದ್ದಾರೆ.

1981ನೆಯ ಮಾರ್ಚಿ ಮಾಹೆಯಲ್ಲಿ ಈ ಕೆಳಗೆ ಕಂಡಂತೆ ಸಹಾಯದ್ರವ್ಯವನ್ನು ಕೃತಜ್ಞತೆಯಿಂದ ಸ್ವೀಕರಿಸಲಾಗಿದೆ :—

**ಗ್ರಂಥಪ್ರಕಟನ ನಿಧಿಗೆ :** ಪಂಡಿತರ ಪ್ರವಾಸಕಾಲದಲ್ಲಿ ಶಿವಮೊಗ್ಗ, ಮಹಾಜನರುಗಳಿಂದ ಕಾಣಿಕೆ ರೂ. ೧,೧೭೨ ; ಪಿ. ಜಯವಾಸುದೇವಶಾಸ್ತ್ರಿಗಳು, ಹುಬ್ಬಳ್ಳಿ ರೂ. ೨೦ ; ಒಟ್ಟು ರೂ. ೧೧೯೨.

**ಪ್ರಕಟನ ಮೂಲನಿಧಿಗೆ :** ಶ್ರೀ॥ ಎಲ್. ಜಿ. ದೇಸಾಯಿಯವರು, ಬೆಂಗಳೂರು, ರೂ. ೫೦೦ ; ಎಸ್. ಶ್ರೀರಾಮ್‌ರವರು, ಬೆಂಗಳೂರು, ರೂ, ೨೫ ; ಒಟ್ಟು ರೂ. ೫೨೫ ;

(ಮಾರೆಹಾಳೆಯ ಮೂರನೆಯ ಪುಟವನ್ನು ನೋಡಿರಿ.)

|| ಓಂ ಜಯ ಶ್ರೀ ಶಂಕರಭಗವನ್ ||

ಶ್ರುತಿಸ್ಮೃತಿಪುರಾಣಾನಾಮಾಲಯಂ ಕರುಣಾಲಯಮ್ | ನಮಾಮಿ ಭಗವತ್ಪಾದಶಂಕರಂ ಲೋಕಶಂಕರಮ್ ||

ಅಧ್ಯಾತ್ಮಪ್ರಕಾಶ ಬೆಂಗಳೂರುಶಾಖಾ ಕಾರ್ಯಾಲಯ,

ತ್ಯಾಗರಾಜನಗರ, ಬೆಂಗಳೂರು-೫೬೦೦೨೮.

# ಶ್ರೀ ಶಂಕರಸಪ್ತಾಹಮಹೋತ್ಸವಾಹ್ವಾನ ಪತ್ರಿಕಾ.

ಇದೇ ಶ್ರೀ ದುರ್ಮತಿನಾಮಸಂವತ್ಸರದ ವೈಶಾಖ ಶುದ್ಧ ಪಂಚಮೀ (8-5-1981) ಶುಕ್ರವಾರದಿಂದ ದ್ವಾದಶೀ (15-5-1981) ಶುಕ್ರವಾರದ ವರೆಗೆ ಉಭಯದಿನಗಳೂ ಸೇರಿ

ಬ್ರಹ್ಮೀಭೂತ ಶ್ರೀಶ್ರೀ ಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರ ಭಾವಸಮಾಧಿಯ ದಿವ್ಯಸಂನಿಧಿಯಲ್ಲಿ ಶ್ರೀ ಮತ್ಪರಮಹಂಸ ಶ್ರೀಶ್ರೀ ಜ್ಞಾನಾನಂದೇಂದ್ರಸರಸ್ವತೀಸ್ವಾಮಿಗಳವರ ಘನ ಅಧ್ಯಕ್ಷತೆಯಲ್ಲಿ ಶ್ರೀ ಶಂಕರಸಪ್ತಾಹಮಹೋತ್ಸವವನ್ನು ನಡೆಸಲಾಗುತ್ತದೆ.

ಬೆಳಗ್ಗೆ 6 ರಿಂದ 7-30ರವರೆಗೆ ಏಕಾದಶವಾರ ರುದ್ರಾಭಿಷೇಕ ಪೂಜೆ, 8 ರಿಂದ 8-30ರವರೆಗೆ ಸಾಮೂಹಿಕ ವಿಷ್ಣುಸಹಸ್ರನಾಮ ಸ್ತೋತ್ರಪಾರಾಯಣ, 8-30 ರಿಂದ 10ರವರೆಗೆ ಮಡಿಯಲ್ಲಿ ಭಾಷ್ಯಪ್ರವಚನ, 10 ರಿಂದ 10-30ರವರೆಗೆ ಪಾದಪೂಜಾ ಮಂಗಳಾರತಿ; ಮಧ್ಯಾಹ್ನ 3-30 ರಿಂದ 4 ರವರೆಗೆ ಪುನಃ ಸಾಮೂಹಿಕ ಪಾರಾಯಣವೂ 4 ರಿಂದ 5-30ರವರೆಗೆ ವೇದಾಂತೋಪನ್ಯಾಸಗಳೂ ; ರಾತ್ರಿ 7ರಿಂದ 8-30ರವರೆಗೆ ಸಂಗೀತ, ಕೊಳಲುವಾದನ, ಗಮಕವಾಚನ, ಭಜನೆ ಮುಂತಾದ ಕಾರ್ಯಕ್ರಮಗಳೂ ನಡೆಯುತ್ತವೆ.

ವಿದ್ವಾಂಸರುಗಳ ಹೆಸರುಗಳನ್ನು ಆಯಾ ಹಿಂದಿನ ದಿನವೇ ತಿಳಿಸಲಾಗುತ್ತದೆ.

ಮಹಾಜನರು ಈ ಕಾರ್ಯಕ್ರಮಗಳಲ್ಲಿ ಭಾಗಿಗಳಾಗಿ ಶ್ರೀ ಶಂಕರರ ಅನುಗ್ರಹಕ್ಕೆ ಪಾತ್ರರಾಗಬೇಕಾಗಿ ಪ್ರಾರ್ಥನೆ.

ಬೆಂಗಳೂರು-560028
ತಾರೀಖು 1-5-1981

ಅಧ್ಯಾತ್ಮಪ್ರಕಾಶಕಾರ್ಯಾಲಯ,
(ಬೆಂಗಳೂರುಶಾಖೆ)

ತಾ|| 8-5-1981 ರಿಂದ 15-5-1981 ರವರೆಗೆ ಬೆಂಗಳೂರಿನ ಅಧ್ಯಾತ್ಮಪ್ರಕಾಶಶಾಖಾಕಾರ್ಯಾಲಯದಲ್ಲಿ ನಡೆಯಲಿರುವ ಶ್ರೀ ದುರ್ಮತಿನಾಮಸಂವತ್ಸರದ ಶ್ರೀಶಂಕರಸಪ್ತಾಹಮಹೋತ್ಸವದ ಕಾರ್ಯಕ್ರಮಗಳು.

| | | ಬೆಳಗ್ಗೆ 8-30ರಿಂದ 10ರವರೆಗೆ ಭಾಷ್ಯಪ್ರವಚನಗಳು | ಮಧ್ಯಾಹ್ನ 4ರಿಂದ 5-30ರವರೆಗೆ ಉಪನ್ಯಾಸಗಳು |
|---|---|---|---|
| 8-5-81 | ಶುಕ್ರವಾರ | ಬ್ರಹ್ಮಸೂತ್ರಭಾಷ್ಯ | ವೇದಾಂತಸಿದ್ಧಾಂತ |
| 9-5-81 | ಶನಿವಾರ | ಶ್ರೀಮದ್ಭಗವದ್ಗೀತಾಭಾಷ್ಯ | ವೇದಾಂತಕ್ಕೆ ಶ್ರೀಶಂಕರರ ಕೊಡುಗೆ |
| 10-5-81 | ಭಾನುವಾರ | ಕಠೋಪನಿಷದ್ಭಾಷ್ಯ | ಅಧ್ಯಾತ್ಮಸಾಧನಗಳು |
| 11-5-81 | ಸೋಮವಾರ | ಮುಂಡಕೋಪನಿಷದ್ಭಾಷ್ಯ | ತತ್ತ್ವಜ್ಞಾನದ ಸ್ವರೂಪ |
| 12-5-81 | ಮಂಗಳವಾರ | ಮಾಂಡೂಕ್ಯೋಪನಿಷದ್ಭಾಷ್ಯ | ಸಾರ್ವತ್ರಿಕಾನುಭವ |
| 13-5-81 | ಬುಧವಾರ | ಬ್ರಹ್ಮಸೂತ್ರಭಾಷ್ಯ | ಅವಸ್ಥಾತ್ರಯವಿವೇಕ |
| 14-5-81 | ಗುರುವಾರ | ಶ್ರೀಮದ್ಭಗವದ್ಗೀತಾಭಾಷ್ಯ | ತತ್ತ್ವಮಸಿ |
| 15-5-81 | ಶುಕ್ರವಾರ | ಬೆಳಗ್ಗೆ 8-30ರಿಂದ ಉಪಸಂಹಾರಭಾಷಣ, ಮಹಾಮಂಗಳಾರತಿ. | |

ಬೇರೆಬೇರೆಯ ವಿದ್ವಾಂಸರುಗಳಿಂದ ಪ್ರವಚನ ಉಪನ್ಯಾಸಗಳು ನಡೆಯುತ್ತವೆ.

ಅಧ್ಯಾತ್ಮಪ್ರಕಾಶ ಮುದ್ರಣಾಲಯ, ಹೊಳೆನರಸೀಪುರ.

# ಅಧ್ಯಾತ್ಮಪ್ರಕಾಶ

ಸಂಪುಟ ೫೦]  ವರ್ಷಕ್ಕೆ ರೂ. ೧೦-೦೦ ; ಬಿಡಿ ಸಂಚಿಕೆಗೆ : ೧ ರೂ.  [ಸಂಚಿಕೆ ೯

ಮೇ 1981

(ಶ್ರೀ ದುರ್ಮತಿಸಂವತ್ಸರದ ವೈಶಾಖ)

## ಸತ್ಯಾತ್ಮ ಹೃದಯಬ್ರಹ್ಮದ ಸ್ತುತಿ

**ತೇ ದೇವಾಃ ಸತ್ಯಮೇವೋಪಾಸತೇ ತದೇತತ್ ತ್ರ್ಯಕ್ಷರಂ ಸತ್ಯಮಿತಿ.... ಪ್ರಥಮೋತ್ತಮೇ ಅಕ್ಷರೇ ಸತ್ಯಂ ಮಧ್ಯತೋಽನೃತಂ ತದೇತದನೃತಮುಭಯತಃ ಸತ್ಯೇನ ಪರಿಗೃಹೀತಮ್ ॥**

**—ಬೃಹದಾರಣ್ಯಕ.** ೫-೫-೧.

**ಭಾವಾರ್ಥ :** ಆ ದೇವತೆಗಳು ಸತ್ಯವನ್ನೇ ಉಪಾಸನೆಮಾಡುತ್ತಾರೆ. ಸತ್ಯಮ್ ಎಂಬ ಆ ಇದು ಮೂರಕ್ಷರದ್ದು. (ಸ-ತಿ-ಯ ಎಂಬಿವೇ ಆ ಮೂರು). ಇಲ್ಲಿ ಮೊದಲು ಕೊನೆಯ ಅಕ್ಷರಗಳು ಸತ್ಯವು. ನಡುವಿನದು ಅನೃತವು. ಈ ಅನೃತವು ಎರಡು ಕಡೆಯಲ್ಲಿಯೂ ಸತ್ಯದಿಂದ ಪರಿಗೃಹೀತವಾಗಿರುತ್ತದೆ.

[ಹೃದಯಬ್ರಹ್ಮವು ಸತ್ಯರೂಪವಾಗಿದೆ. ಸತ್ಯ- ಎಂಬ ಪದದಲ್ಲಿರುವ ಮೂರಕ್ಷರಗಳಲ್ಲಿ ನಡುವಿನ 'ತ್' ಎಂಬಕ್ಷರವು ಮಾತ್ರ ಸುಳ್ಳಾಗಿದ್ದು ಎರಡೂಕಡೆಗಳಲ್ಲಿ ನಿಜದಿಂದ ಆವರಿಸಲ್ಪಟ್ಟದೆ- ಎಂದು ಚಿಂತಿಸುವವನಿಗೆ ಸುಳ್ಳಿನಿಂದ ಯಾವ ಹಿಂಸೆಯೂ ಆಗಲಾರದೆಂದು ಭಾವ.]

---

# ಅಧ್ಯಾತ್ಮಸಂದೇಶ

(ಗುರುಕಿಂಕರ)

## ಸತ್ಯನಾಮಾಕ್ಷರಗಳ ಉಪಾಸನೆ

ಹಿಂದಿನ ಸಂದೇಶದ ಕಡೆಯಲ್ಲಿ ತಿಳಿರುವಂತೆ ಈಗ ಹೃದಯಬ್ರಹ್ಮದ ಉಪಾಸನೆಯ ವಿಚಾರವನ್ನು ಮುಂದುವರಿಸೋಣ. ಉಪನಿಷತ್ತಿನಲ್ಲಿ ಹೃದಯವನ್ನು ಸತ್ಯಬ್ರಹ್ಮವೆಂದು ಕರೆದು 'ಅದು ಮಹದ್ಯಕ್ಷವೂ ಪ್ರಥಮಜವೂ ಆಗಿದೆ' ಎಂದು ಚಿಂತಿಸಬೇಕೆಂದು ತಿಳಿಸಿದೆ. ಹೃದಯದಲ್ಲಿಯೇ ಬ್ರಹ್ಮವು ಸಕಲರಿಗೂ ಉಪಾಸ್ಯವೂ ಜ್ಞೇಯವೂ ಆಗಿರುವದೆಂದು ಶ್ರುತಿಗಳ ಅಭಿಪ್ರಾಯ. ಆದ್ದರಿಂದ ನಾವು ಲೌಕಿಕವಾಗಿ ದೇವರು- ಎಂದು ವ್ಯವಹರಿಸುವ ಬ್ರಹ್ಮವನ್ನು ಹೃದಯದಿಂದಲೇ ಅರಿತು ವ್ಯವಹರಿಸಬೇಕಾಗಿದೆ. ಈ ಜಗತ್ತಿನಲ್ಲಿ ದೇವರಿಲ್ಲ- ಎಂಬ ನಾಸ್ತಿಕರು ಕೂಡ 'ತಮಗೆ ಹೃದಯವಿಲ್ಲ' ಎಂಬಿದನ್ನು ಒಪ್ಪಲಾರರು. ಆದರೆ ನನಗೆ ತಿಳಿದಂತೆ ಬಹಳ ಜನರು ನಾಸ್ತಿಕರೆಂದು ತಮ್ಮನ್ನು ಕರೆದುಕೊಳ್ಳುವವರು ಕೂಡ ಗುಟ್ಟಾಗಿ ದೇವರನ್ನು ನಂಬಿಯೇ ಇರುತ್ತಾರೆ. ಹಾಗೆ ನಂಬುವಾಗ ಆ ನಿಜವು ಅವರ ಹೃದಯಗೋಚರವಾಗಿಯೇ ಇರಲೇಬೇಕಲ್ಲವೆ? ಇಲ್ಲವಾದರೆ ಆ ನಂಬಿಕೆಯನ್ನು ಅವರು ಅನುಭವಿಸುವದಾದರೂ ಹೇಗೆ? ಸರ್ವಥಾ ನಂಬಿಕೆಯೇ ಇಲ್ಲ ಎನ್ನುವವರಿಗೆ ಜೀವನವೇ ಇಲ್ಲವಾಗುವದು. ಆದ್ದರಿಂದ ದೇವರಿಲ್ಲ- ಎಂಬವನ ಮತದಲ್ಲಿಯೂ ತನಗಿಂತ ಬೇರೆಯಾಗಿ ದೇವರಿಲ್ಲವೆಂದೇ ಅರ್ಥ. ಆ ತಾನೆಂಬುದು ವೇದಾಂತಶಾಸ್ತ್ರದ ಪ್ರಕಾರ ಬ್ರಹ್ಮವೇ. ಅದೇ ಹೃದಯದಲ್ಲಿ ಸತ್ಯವೆಂಬ ಹೆಸರಿನಿಂದಲೂ ವಿರಾಜಿಸುತ್ತಿದೆ. ಸತ್ಯವನ್ನೇ 'ದೇವರು' ಎಂದು ಗಾಂಧೀಜಿ ಕರೆಯುತ್ತಿದ್ದರು. ಉಪನಿಷತ್ತು ಕೂಡ ಈಗ ಹೃದಯಪ್ರದೇಶದಲ್ಲಿ ಸತ್ಯವೆಂಬ ಹೆಸರಿನಿಂದ ದೇವರನ್ನು ಚಿಂತಿಸುವದನ್ನೇ ಹೇಳಿಕೊಡುತ್ತಿದೆ. ಯಾವದೇ ದೇವರನ್ನು ಪ್ರಾಣಪ್ರತಿಷ್ಠೆಮಾಡುವಾಗಲೂ ನಾವು ಹೃದಯವನ್ನು ಮುಟ್ಟಿಕೊಂಡು ಅನಂತರ ದೇವತೆಯ ಬಿಂಬವನ್ನು ಮುಟ್ಟಿ "ನನ್ನ ಪ್ರಾಣಗಳೂ ಆತ್ಮವೂ ಈ ದೇವತೆಯ ಪ್ರಾಣಗಳೂ ಆತ್ಮವೂ ಒಂದಾಗಿ ಈ ಬಿಂಬದಲ್ಲಿ ತೋರಿಕೊಂಡು ಶಾಶ್ವತವಾಗಿರಲಿ!" ಎಂಬ ಅರ್ಥದ ಮಂತ್ರವನ್ನು ಪಠಿಸುವೆವು. ಇದರಿಂದ ತಿಳಿಯುವದೇನೆಂದರೆ : ಹೃದಯವನ್ನು ದೇವರ ಶಾಶ್ವತ ವಾಸಸ್ಥಾನವಾಗಿ ನಾವೆಲ್ಲರೂ ಸ್ವೀಕರಿಸಿರುತ್ತೇವೆ. ಆದ್ದರಿಂದಲೇ ಹೃದಯೋಪಾಸನೆಯ ಬಗೆಗಳನ್ನು ಈಗ ಪ್ರಸ್ತಾಪಿಸಲಾಗುತ್ತಿದೆ.

ಹೃದಯಬ್ರಹ್ಮವನ್ನು 'ಪ್ರಥಮಜವಾದ ಮಹದ್ಯಕ್ಷ'ವೆಂದು ಚಿಂತಿಸಬೇಕು- ಎಂಬ ವಾಕ್ಯವನ್ನು ಈಗ ವಿಚಾರಮಾಡೋಣ. ಪ್ರಥಮಜನೆಂದರೆ ಮೊದಲು ಹುಟ್ಟಿದ್ದು- ಎಂದರ್ಥ. ಬ್ರಹ್ಮಕ್ಕೆ ನಿಜವಾಗಿ ಹುಟ್ಟಿಲ್ಲವಾದರೂ ಸೃಷ್ಟಿಯ ಆರಂಭದಲ್ಲಿ ಅದೇ ಮೊದಲನೆಯದಾಗಿ ತೋರಿಕೊಂಡಿತು. ಪ್ರಪ್ರಥಮಸಂಸಾರಿಯಾದ

ಹಿರಣ್ಯಗರ್ಭನೆನಿಸಿತು. ಇದು ಕೇವಲ ವ್ಯವಹಾರವಾತ್ರವೇ ಹೊರತು ಪರಮಾರ್ಥವಲ್ಲ. ಉಪಾಸನೆಗೆ ಯಾವದಾದರೊಂದು ನಾಮರೂಪಾವಲಂಬನವು ಅಗತ್ಯವಾದ್ದರಿಂದ ಬ್ರಹ್ಮವನ್ನು ಪ್ರಥಮಜವೆಂದು ಹೆಸರಿಸಿದೆ. ಅದಕ್ಕಿಂತ ಮುಂಚಿತವಾಗಿ ಹುಟ್ಟಿರುವದು ಸಂಸಾರಮಂಡಲದಲ್ಲಿ ಯಾವದೂ ಇರುವದಿಲ್ಲ. ಹಾಗೆಯೇ ಅದು ಯಕ್ಷ ಎಂದರೆ ಪೂಜ್ಯವೂ ಆಗಿರುತ್ತದೆ. ಏಕೆಂದರೆ ದೇವತೆಗಳೆಲ್ಲ ಈ ಬ್ರಹ್ಮವನ್ನೇ ಪೂಜಿಸುತ್ತಾರೆ. ನಿಜವಾಗಿ ದೇವತೆಗಳು ತಮ್ಮ ತಂದೆಯಾದ ಪ್ರಜಾಪತಿ ಎಂಬ ಹೆಸರಿನ ವಿರಾಟ್‌ಪುರುಷನನ್ನು ಪೂಜಿಸಬೇಕಾಗಿತ್ತು. ಆದರೆ ಆತನಿಗೂ ತಂದೆಯಾದ ಈ ಬ್ರಹ್ಮವು ಎಲ್ಲಕ್ಕೂ ಮಹತ್ತಿನದಾದ್ದರಿಂದ ಮಹದ್ಯಕ್ಷವೆಂದು ದೇವತೆಗಳು ಗೌರವಿಸುತ್ತಾರೆ. ನಾವು ಕೂಡ ಹೀಗೆಯೇ ಬ್ರಹ್ಮವನ್ನು ಚಿಂತಿಸಬೇಕು. ಅದು ನಮ್ಮ ಹೃದಯದಲ್ಲಿಯೇ ಇದೆ- ಎಂದು ಇಲ್ಲಿ ತಿಳಿಸಿರುತ್ತದೆ. ಮತ್ತು ಈ ಉಪಾಸನೆಗೆ ಐಹಿಕಫಲವನ್ನೂ ತಿಳಿಸಿರುತ್ತದೆ. ಏನೆಂದರೆ : ಮಹದ್ಯಕ್ಷವೆಂದು ಉಪಾಸನೆಮಾಡಿದ್ದರೆ ಫಲವಾಗಿ ಉಪಾಸಕನು ಶತ್ರುವನ್ನು ಜಯಿಸುವವನಾಗುತ್ತಾನೆ; ಹಾಗೂ ಎಲ್ಲಾ ಲೋಕಗಳನ್ನೂ ಗೆದ್ದುಕೊಳ್ಳುವನು. ಈ ಶತ್ರುಜಯವೆಂಬುದು ತನ್ನೊಳಗೇ ಅಡಗಿರುವ ಕಾಮಕ್ರೋಧಾಹಂಕಾರಾದಿ ಶತ್ರುಗಳಿಗೂ ಅನ್ವಯಿಸುತ್ತದೆ. ಒಟ್ಟಿನಲ್ಲಿ ಬ್ರಹ್ಮೋಪಾಸನೆಗೆ ಕಾಮಾದಿಗಳನ್ನು ಗೆಲ್ಲುವಂಥ ಫಲವು ದೊರಕುವದು ಸೂಕ್ತವಾಗಿದೆ. ಇದರಿಂದ ಮುಂದೆ ಬ್ರಹ್ಮಜ್ಞಾನಕ್ಕೆ ಏರಲು ಸಹಾಯವಾಗುವದು.

ಈ ಬ್ರಹ್ಮವನ್ನು ಸತ್ಯಬ್ರಹ್ಮವೆಂದೂ ಚಿಂತಿಸಬೇಕೆಂಬುದು ಮುಂದಿನ ಮೆಟ್ಟಲಾಗಿರುತ್ತದೆ. ನಮ್ಮ ಹೃದಯದಲ್ಲಿರುವ ಬ್ರಹ್ಮವು ಮಹದ್ಯಕ್ಷ ಪ್ರಥಮಜ- ಎರಡೂ ಆಗಿರುವದರ ಜೊತೆಗೆ ಸತ್ಯವೂ ಆಗಿದೆ- ಎಂಬಿದು ಮತ್ತೊಂದು ವಿಶೇಷವು. ಏಕೆಂದರೆ ಸತ್ಯವನ್ನು ಪ್ರತಿಯೊಬ್ಬನೂ ಕಡೆಯಲ್ಲಿ ಬಯಸುತ್ತಾನೆ. ಸತ್ಯವೇ ತನ್ನನ್ನು ಕಾಪಾಡುವದೆಂದೂ ಶತ್ರುವನ್ನು ಕೂಡ ಸತ್ಯದಿಂದಲೇ ಜಯಿಸುತ್ತೇನೆಂದೂ ಮಾನವನು ಭಾವಿಸುತ್ತಾನೆ. ಆದರೆ ಆ ಸತ್ಯವೆಂಬುದು ಬೇರೇನೂ ಆಗದೆ ಬ್ರಹ್ಮವೇ ಆಗಿರುತ್ತದೆ. ಎಂಥ ಕಳ್ಳನೂ ಕೂಡ ಕೋರ್ಟಿನಲ್ಲಿ ಸುಳ್ಳು ಹೇಳಿದರೂ ತನ್ನ ಗುಂಪಿನಲ್ಲಿ ನಿಜವನ್ನೇ ನುಡಿಯುತ್ತಾನೆ. ಏಕೆಂದರೆ ಅದೇ ಅವನಿಗೆ ಜೀವನಾಧಾರವು. ಆದ್ದರಿಂದ ಕಟ್ಟಕಡೆಯಲ್ಲಿಯಾದರೂ ನಿಜವು ಹೊರಬಂದೇ ತೀರುತ್ತದೆ. ನಿಜವನ್ನರಿಯುವವರೆಗೂ ಮನುಷ್ಯನಿಗೆ ಶಾಂತಿಯಾಗಲಿ, ಮುಕ್ತಿಯಾಗಲಿ ಸಿಗುವದಿಲ್ಲ. ಹೀಗಿರುವಲ್ಲಿ ತನ್ನ ಹೃದಯಾಂತರ್ಗತವಾದ ಬ್ರಹ್ಮವನ್ನು ಸತ್ಯವೆಂದು ಕಂಡುಕೊಳ್ಳಲು ಶಕ್ತಿಸಾಲದವನು ಅದು ಸತ್ಯವೆಂಬ ಹೆಸರುಳ್ಳದ್ದೆಂದು ಚಿಂತಿಸಿದರೂ ಸಾಕು. ಎಷ್ಟೋ ಉತ್ತಮನಾಗುವನು. ಇದನ್ನೇ ಸತ್ಯಬ್ರಹ್ಮದ ಉಪಾಸನೆಯೆಂದು ಇಲ್ಲಿ ಕರೆದಿದೆ.

ಈಗ ಬ್ರಹ್ಮದ ಸತ್ಯವೆಂಬ ಹೆಸರನ್ನು ಕುರಿತು ವಿಚಾರಮಾಡಬಹುದಾಗಿದೆ. ಈ ಜಗತ್ತು ನಾಮರೂಪಾತ್ಮಕವಾಗಿ ಹುಟ್ಟುವ ಮುಂಚೆ ನೀರೊಂದೇ ಇತ್ತು- ಎಂದು ಶ್ರುತಿಗಳಲ್ಲಿ ತಿಳಿಸಿದೆ. ನೀರಿನ ವೈಶಿಷ್ಟ್ಯವೇನೆಂದರೆ ಯಜ್ಞದಲ್ಲಿ ನಾವು

ಕೊಡುವ ಆಹುತಿಗಳು ಅನ್ನ-ನೀರು ಇವುಗಳ ರೂಪವಾಗಿರುತ್ತವೆ. ತುಪ್ಪವೇ ಮೊದಲಾದದ್ದು ನೀರಾಗಿರುವದು ಪ್ರಸಿದ್ಧವು. ಈ ಆಹುತಿಗಳೇ ಮುಂದೆ ಪುರುಷನ ಉತ್ಪತ್ತಿಗೆ ಕಾರಣವಾಗಿದ್ದು ರೇತೋರೂಪದಿಂದ ಹೊರಬಂದು ಸೃಷ್ಟಿಯಾಗುವವು. ಅಂತೂ ಪಂಚಭೂತಾತ್ಮಕವಾದ ಈ ಸ್ಥೂಲಪ್ರಪಂಚದ ಮೂಲರೂಪವು ಎಂದರೆ ಕಾರಣರೂಪವು ಅಪ್ಪು- ಎಂಬಿದು ಸಿದ್ಧಾಂತವು. ಈ ಜಗದ್ಬೀಜವನ್ನು ಅವ್ಯಾಕೃತ ವೆಂದೂ ಕರೆಯುವರು. ಇಂಥ ಅಪ್ಪುಗಳು ಮೊದಲಿಗೆ ಸತ್ಯವನ್ನು ಸೃಷ್ಟಿಮಾಡಿದವು. ಆ ಸತ್ಯನೇ ಹಿರಣ್ಯಗರ್ಭನು- ಎಂದು ತಿಳಿಯಬೇಕು. ಪುರುಷಸೂಕ್ತದ ವರ್ಣನೆ ಯಂತೆಯೂ ದೇವತೆಗಳ ಯಜ್ಞದಿಂದ ಹೊರಬಂದ ವಿರಾಟ್‌ಪುರುಷನೇ ಈ ಸ್ಥೂಲ ಜಗತ್ತಿನ ಆತ್ಮನಾಗಿರುವನು. ಅವನನ್ನೂ ಸತ್ಯನೆಂದು ಕರೆಯಬಹುದಾಗಿದೆ. ಏಕೆಂದರೆ ಅವನು ಹಿರಣ್ಯಗರ್ಭನ ಮಗನಾಗಿರುವನು. ಹೇಗೇ ಇರಲಿ, ಈ ಸೃಷ್ಟಿಯ ವಿವರಗಳು ನಮಗೆ ಬ್ರಹ್ಮದ ಪರಿಚಯಕ್ಕೆ ಸಹಾಯಕವಾಗಿರುವವು. ಹಾಗೂ ಸತ್ಯಾದಿನಾಮಗಳು ಬ್ರಹ್ಮೋಪಾಸನೆಗೆ ಆಲಂಬನವಾಗಿರುವವು. ಇಷ್ಟುಮಾತ್ರ ಇಲ್ಲಿ ವಿವಕ್ಷಿತವಾಗಿದೆ. ನಮಗೆ ಈಗ ಆಧಿದೈವಿಕವಾಗಿ ತೋರುತ್ತಿರುವ ಸೂರ್ಯ ನೂ ಸತ್ಯನೇ ಆಗಿರುತ್ತಾನೆ. ಈ ಉಪಾಸನೆಯ ವಿವರವನ್ನು ಮುಂದೆ ತಿಳಿಸ ಲಾಗುವದು. ಪ್ರಕೃತ- ಈ ಸತ್ಯಬ್ರಹ್ಮವು ಉಳಿದ ಎಲ್ಲಾ ದೇವತೆಗಳನ್ನೂ ಮೀರಿ ದ್ದಾಗಿದೆ- ಇದರ ಮಹಿಮೆಯು ಅಪಾರವು. ಸತ್ಯವೆಂಬ ವಿಶೇಷಣದಲ್ಲಿ ಈ ಎಲ್ಲಾ ಅಂಶಗಳೂ ಅಡಗಿರುತ್ತವೆ. ಲೋಕದಲ್ಲಿ ನಾವು ಉಪಯೋಗಿಸುವ ಸತ್ಯವೆಂಬ ಶಬ್ದಕ್ಕಿಂತ ಬ್ರಹ್ಮಕ್ಕೆ ವಿಶೇಷಣವಾಗಿರುವ ಈ ಸತ್ಯದ ಅರ್ಥವು ವಿಶಾಲವಾಗಿರುತ್ತದೆ. ಇದು ಬ್ರಹ್ಮದ ನೇರಾದ ವಾಚಕವಾಗಿದ್ದು ಉಪಾಸ್ಯವಾಗಿಯೂ ಇರುತ್ತದೆ. ವ್ರತಕಥೆಗಳಲ್ಲಿ ಹೆಸರಿಸುವ ಸತ್ಯನಾರಾಯಣನೆಂಬ ದೇವನನ್ನೂ ಇಲ್ಲಿ ನೆನಪುಮಾಡಿ ಕೊಳ್ಳಬಹುದು. ಜಗತ್ಕಾರಣವಾದ ಪರಬ್ರಹ್ಮವನ್ನು ಸತ್ಯವೆಂಬ ಹೆಸರಿನಿಂದ ಉಪನಿಷತ್ತುಗಳಲ್ಲಿ ಕರೆದಿರುವದು ಪ್ರಚುರವಾಗಿರುತ್ತದೆ. ಕೆಲವು ವೇಳೆ ಸತ್- ಎಂದಿಷ್ಟೇ ಹೇಳಿರುವದೂ ಉಂಟು. ಸತ್, ಸತ್ಯ- ಇವುಗಳಿಗೆ ಒಂದೇ ಅರ್ಥವೆಂತ ಇಲ್ಲಿ ಭಾವಿಸಿ ಬ್ರಹ್ಮವು ಉಪಾಸ್ಯವಾದಾಗ ಸತ್ಯವೆಂದೂ ಜ್ಞೇಯವಾದಾಗ ಸತ್ ಎಂದೂ ವೇದಾಂತಗಳಲ್ಲಿ ವ್ಯವಹರಿಸಲ್ಪಟ್ಟಿದೆ- ಎಂದು ಭಾವಿಸಿದರೂ ತಪ್ಪಲ್ಲ. ಅಂತೂ ಸತ್ಯವು ಪರಮಾರ್ಥಸತ್ಯದಲ್ಲಿಯೇ ಪರ್ಯವಸಾನವಾಗಿದ್ದು ಉಪಾಸನೆಯ ಮಟ್ಟದಲ್ಲಿ ಅದೊಂದು ಹೆಸರಾಗಿ ಉಳಿದುಕೊಂಡಿರುತ್ತದೆ.

ಈಗ ಮತ್ತೊಮ್ಮೆ ಸತ್ಯಶಬ್ದವನ್ನು ವಿಶ್ಲೇಷಿಸಲಾಗುವದು. ಹೇಗೆಂದರೆ: ಸ-ತ್-ಯ ಎಂಬ ಮೂರು ಅಕ್ಷರಗಳು (ವ್ಯಂಜನಗಳು) ಸೇರಿ ಸತ್ಯವೆಂಬ ನಾಮವು ಹುಟ್ಟಿರುತ್ತದೆ. ಇವುಗಳಲ್ಲಿ 'ತ್' ಎಂಬಕ್ಷರವು ಅನೃತವು- ಸುಳ್ಳಾಗಿರುತ್ತದೆ. ಸ ಮತ್ತು ಯ, ಎಂಬಕ್ಷರಗಳು ನಿಜವಾಗಿವೆ. ಹೀಗೆ ಹೇಳಲು ಆಧಾರವೇನೆಂದರೆ: ವೇದೋಕ್ತವಾಗಿರುವ ಈ ಸತ್ಯಶಬ್ದದಲ್ಲಿ ಸಕಾರ ಯಕಾರಗಳು 'ಅ' ಎಂಬ ಸ್ವರಾಕ್ಷರ ದೊಡನೆ ಕೂಡಿವೆ. 'ಅ' ಎಂಬಿದು ಅಮೃತವೆನಿಸಿರುವದು. ಈ ಅಮೃತದೊಡನೆ

ಹೊಂದಿಕೊಂಡಿರುವ ಈ ಸ,ಯ-ಕಾರಗಳು ಎರಡೂ ಕಡೆಯಿಂದ 'ತ್' ವನ್ನು ಆವರಿಸಿಕೊಂಡಿವೆ. ಸತ್ಯ–ಎಂಬ ಶಬ್ದದಲ್ಲಿ ತ ಕಾರಕ್ಕೆ ಸ್ವರಸಂಯೋಗವಿಲ್ಲ. ಅದು ಕೇವಲ ವ್ಯಂಜನಮಾತ್ರವು. ಅದಕ್ಕೆ ಅಮೃತದ ಸಂಪರ್ಕವಿರುವದಿಲ್ಲ. ಆದ್ದರಿಂದಲೇ ಅದು ಮೃತ್ಯುವು– ಎಂದು ತಿಳಿಯಬೇಕು. ಅದು ಸ್ವರದ ಸಹಾಯವಿಲ್ಲದ ನಿರ್ಜೀವಾಕ್ಷರವಾಗಿದೆ. ಶಬ್ದಶಾಸ್ತ್ರದಂತೆ ಸ್ವರವರ್ಣಗಳು ಸ್ವತಂತ್ರಗಳು ಹಾಗೂ ಸಜೀವಗಳು ; ವ್ಯಂಜನಗಳು ನಿರ್ಜೀವಗಳು. ಆದ್ದರಿಂದಲೇ ಎಲ್ಲಾ ವ್ಯಂಜನಗಳನ್ನೂ ಪ್ರಯೋಗಿಸುವಾಗ ಸ್ವರಗಳನ್ನು ಜೋಡಿಸಿಯೇ ಬಳಸುತ್ತೇವೆ. ಕೇವಲ ವ್ಯಂಜನಗಳಿಗೆ ಪ್ರಯೋಗವಿಲ್ಲ. ಅವು ಎಂದಿಗೂ ಸ್ವತಂತ್ರವಾಗಿ ತಾವೇ ಒಂದರೊಡನೊಂದು ಸೇರಿ ಶಬ್ದವಾಗಲಿ, ಪದವಾಗಲಿ ಆಗಲಾರವು. ಕಾಗುಣಿತದ ರಹಸ್ಯವು ಇದೇ ಆಗಿದೆ. ಆದ್ದರಿಂದ ಈ ಸತ್ಯಶಬ್ದದಲ್ಲಿ ನಡುವೆ ಸೇರಿರುವ 'ತ್' ಎಂಬಿದು ಸ್ವರಸಂಯೋಗವಿಲ್ಲದ ಅನೃತವಾಗಿದೆ. ಆದರೆ ಇದರ ಹಿಂದೆಯೂ ಮುಂದೆಯೂ ಸಜೀವವಾದ ಸತ್ಯಾಕ್ಷರಗಳಿರುವದರಿಂದ ಸತ್ಯದಿಂದಾವೃತವಾದ ಅನೃತವು ಏನೂ ಕಾರ್ಯಕಾರಿಯಾಗಲಾರದು– ಎಂದಭಿಪ್ರಾಯ. ಹೀಗೆ ಉಪಾಸನೆಮಾಡುವವನಿಗೆ ಅನೃತವು ಏನೂ ತೊಂದರೆಮಾಡುವದಿಲ್ಲ. ಅಂದರೆ ಸತ್ಯೋಪಾಸಕನು ಅನೃತವನ್ನು ನುಡಿಯುವದೇ ಇಲ್ಲ. ಪ್ರಮಾದವಶದಿಂದ ಒಂದುವೇಳೆ ಅನೃತವು ಅವನ ಬಾಯಲ್ಲಿ ಬಂದರೂ ಈ ಉಪಾಸನಾಬಲದಿಂದ ಅವನಿಗೆ ಕೆಡುಕಾಗುವದಿಲ್ಲ– ಎಂದು ಫಲವನ್ನು ತಿಳಿಸಿದೆ. ಸತ್ಯವೇ ಪ್ರಧಾನವಾಗಿರುವ ಈ ಪ್ರಪಂಚದಲ್ಲಿ ಅನೃತದ ಸ್ಥಾನವು ಹುಸಿಯಾಗಿರುತ್ತದೆ. ಅದು ಬಹಳಕಾಲ ಇರಲಾರದು. ಹೀಗೆ ಸರ್ವವೂ ಸತ್ಯಾತ್ಮಬ್ರಹ್ಮವೇ ಆಗಿರುವದರಿಂದ ಜಗತ್ತು ಸತ್ಯಪ್ರಚುರವೂ ಸತ್ಯಾಧಾರವೂ,ಸತ್ಯಪೂರ್ಣವೂ ಆಗಿದೆ. "ಸತ್ಯದಿಂದಲೇ ಗಾಳಿಯು ಬೀಸುತ್ತಿದೆ ; ಸತ್ಯದಿಂದಲೇ ಸೂರ್ಯನು ದ್ಯುಲೋಕದಲ್ಲಿ ಬೆಳಗುತ್ತಿರುವನು; ವಾಕ್ಕಿಗೆ ಸತ್ಯವೇ ಆಧಾರವಾಗಿದೆ. ಸತ್ಯದಲ್ಲಿ ಎಲ್ಲವೂ ನೆಲೆಗೊಂಡಿರುವದು ; ಆದ್ದರಿಂದ ಸತ್ಯವನ್ನು ಹೆಚ್ಚಿನದೆಂದು ಬಲ್ಲವರು ಹೇಳುವರು" ಎಂದು ಶ್ರುತಿಯೂ ಗಾನಮಾಡುತ್ತಿದೆ. ರಾಮಾಯಣದಲ್ಲಿಯೂ ಸತ್ಯವೇ ಜಗತ್ತಿಗೆ ಒಡೆಯನೆಂದೂ ಸತ್ಯದಲ್ಲಿಯೇ ಲಕ್ಷ್ಮಿಯು ವಾಸವಾಗಿರುವಳೆಂದೂ ಎಲ್ಲವೂ ಸತ್ಯವನ್ನೇ ಬುಡವಾಗಿ ಹೊಂದಿರುತ್ತದೆಯೆಂದೂ ಸತ್ಯಕ್ಕಿಂತ ಹೆಚ್ಚಿನ ಪದವಿಯಿಲ್ಲವೆಂದೂ ತಿಳಿಸಿರುತ್ತದೆ. ಇವೆಲ್ಲ ಸತ್ಯದ ಸ್ತುತಿಗಳಾಗಿವೆ.

ಆದರೆ ಜಗತ್ತು ತನ್ನ ತೋರಿಕೆಯ ರೂಪದಿಂದ ಸತ್ಯವಲ್ಲ. ಸತ್ಯಾನೃತಗಳ ಮಿಥುನೀಕರಣವಾಗಿರುವ ಈ ಪ್ರಪಂಚದಲ್ಲಿ ನಾಮರೂಪಗಳೆಂಬ ಅನೃತಗಳನ್ನು ಬಾಧಮಾಡಿದರೆ ಉಳಿಯುವ ತಿರುಳೇ ಸತ್ಯಪರಬ್ರಹ್ಮವು– ಎಂದು ಅಭಿಪ್ರಾಯ. ಈ ಸತ್ಯೋಪಾಸನೆಯ ವಿವರವನ್ನು ಮುಂದಿನ ಸಂದೇಶದಲ್ಲಿಯೂ ಪ್ರಸ್ತಾಪಿಸಲಾಗುವದು.

---

# ಸಾಮಾನ್ಯನೀತಿ

ಸಿಂಹಾದೇಕಂ ಬಕಾದೇಕಂ ಷಟ್ ಶುನಸ್ತ್ರೀಣಿ ಗರ್ದಭಾತ್ ।
ವಾಯಸಾತ್ ಪಂಚ ಶಿಕ್ಷೇಚ್ಚ ಚತ್ವಾರಿ ಕುಕ್ಕುಟಾದಪಿ ॥ ೧ ॥

೧. ಸಿಂಹದಿಂದ ಒಂದು, ಬಕಪಕ್ಷಿಯಿಂದ ಒಂದು, ನಾಯಿಯಿಂದ ಆರು, ಕತ್ತೆಯಿಂದ ಮೂರು, ಕಾಗೆಯಿಂದ ಐದು, ಕೋಳಿಯಿಂದ ನಾಲ್ಕು-ಹೀಗೆ (ಮನುಷ್ಯನು) ಪಾಠಗಳನ್ನು ಕಲಿಯಬೇಕು.

ಪ್ರಭೂತಮಲ್ಪಕಾರ್ಯಂ ವಾ ಯೋ ನರಃ ಕರ್ತುಮಿಚ್ಛತಿ ।
ಸರ್ವಾರಂಭೇಣ ತತ್ ಕುರ್ಯಾತ್ ಸಿಂಹಾದೇಕಂ ಪ್ರಕೀರ್ತಿತಮ್ ॥ ೨ ॥

೨. ಯಾವನೇ ಆಗಲಿ, ಸಣ್ಣದಾಗಲಿ, ದೊಡ್ಡದಾಗಲಿ, ಕೆಲಸವನ್ನು ಸಾಧಿಸಲು ಇಚ್ಛಿಸಿದಾಗ ಆ ಕಾರ್ಯವನ್ನು ಎಲ್ಲಾ ರೀತಿಯ ಪ್ರಯತ್ನ- ಉತ್ಸಾಹ-ಶಕ್ತಿ ಯುಕ್ತಿಗಳಿಂದಲೂ ಮಾಡಿ ಪೂರೈಸಬೇಕು. ಇದೇ ಸಿಂಹದ ಪಾಠವು.

ಸರ್ವೇಂದ್ರಿಯಾಣಿ ಸಂಯಮ್ಯ ಬಕವತ್ ಪತಿತೋ ಜನಃ ।
ಕಾಲದೇಶೋಪಪನ್ನಾನಿ ಸರ್ವಕಾರ್ಯಾಣಿ ಸಾಧಯೇತ್ ॥ ೩ ॥

೩. ಎಲ್ಲಾ ಇಂದ್ರಿಯಗಳನ್ನೂ ಬಕನಂತೆ ಹತೋಟಿಯಲ್ಲಿರಿಸಿಕೊಂಡು ಮಿತವ್ಯಯದಿಂದ ದೇಶಕಾಲಗಳಿಗೆ ತಕ್ಕಂತೆ ಸಮಸ್ತ ಕೆಲಸಗಳನ್ನೂ ಸಾಧಿಸಿಬಿಡಬೇಕು. ಇದೇ ಬಕದಿಂದ ಕಲಿಯುವ ಪಾಠವು.

ಬಹ್ವಾಶೀ ಸ್ವಲ್ಪಸಂತುಷ್ಟಃ ಸುನಿದ್ರಃ ಶೀಘ್ರಚೇತನಃ ।
ಪ್ರಭುಭಕ್ತಶ್ಚ ಶೂರಶ್ಚ ಜ್ಞಾತವ್ಯಾಃ ಷಟ್ ಶುನೋ ಗುಣಾಃ ॥ ೪ ॥

೪. ಬಹಳ ಹಸಿವುಳ್ಳವನು ; ಆದರೆ ಸ್ವಲ್ಪ ಆಹಾರದಲ್ಲಿಯೇ ತೃಪ್ತನಾಗುವವನು; ಚೆನ್ನಾಗಿ ನಿದ್ರಿಸುವವನು ; ಆದರೆ ಬೇಗ ಎಚ್ಚರಗೊಳ್ಳುವವನು. ಸ್ವಾಮಿನಿಷ್ಠೆಯೂ ಶೌರ್ಯವೂ ಉಳ್ಳವನು. ಈ ಆರು ಗುಣಗಳನ್ನು ನಾಯಿಯಿಂದ ಕಲಿಯಬೇಕು.

ಅವಿಶ್ರಾಮಂ ವಹೇದ್ ಭಾರಂ ಶೀತೋಷ್ಣಂ ಚ ನ ವಿಂದತಿ ।
ಸಸಂತೋಷಸ್ತಥಾ ನಿತ್ಯಂ ತ್ರೀಣಿ ಶಿಕ್ಷೇತ ಗರ್ದಭಾತ್ ॥ ೫ ॥

೫. ವಿಶ್ರಾಂತಿಯಿಲ್ಲದೆ (ಕಾರ್ಯ)ಭಾರವನ್ನು ಹೊರುವದು, ಬಿಸಿಲುಚಳಿಗಳನ್ನು ಲೆಕ್ಕಿಸದೆಇರುವದು, ತೃಪ್ತನಾಗಿರುವದು- ಈ ಮೂರು ಗುಣಗಳನ್ನು ಕತ್ತೆಯಿಂದ ಕಲಿಯಬೇಕು. (ಉಳಿದ ಎರಡು ಪ್ರಾಣಿಗಳಿಂದ ಕಲಿಯಬೇಕಾದ ಗುಣಗಳನ್ನು ಮುಂದೆ ತಿಳಿಸಲಾಗುವದು).

# ಸತ್ಯಕಾಮನ ಪತ್ರಗಳು

## ಅತೀಂದ್ರಿಯಧ್ಯಾನರಹಸ್ಯ

"ಈಚೆಗೆ ನಮ್ಮ ಊರಿಗೆ ಒಬ್ಬರು 'ಋಷಿ'ಗಳು ದಯಮಾಡಿಸಿದ್ದರು. ಅವರ ನಡೆ, ನುಡಿ, ಸದಾಚಾರಗಳು ಅನುಕರಣೀಯವಾಗಿದ್ದವು. ಅವರ ಸರಳತನ, ನಿರಹಂಕಾರಭಾವಗಳೂ ನನಗೆ ಮೆಚ್ಚುಗೆಯಾದವು. ಅವರು ನಮ್ಮಲ್ಲಿ ಕೆಲವರಿಗೆ ಅತೀಂದ್ರಿಯಧ್ಯಾನದೀಕ್ಷೆಯನ್ನು ನೀಡಿ ಕೆಲವು ರೋಗಗಳನ್ನು ಹತೋಟಿಗೆ ತಂದರು. ರೋಗಿಗಳೂ ಡಾಕ್ಟರುಗಳೂ ಇದನ್ನು ಸಮರ್ಥಿಸಿದರು. ನನಗೆ ಈ ಸನ್ನಿವೇಶವನ್ನು ಕಂಡು ಆಶ್ಚರ್ಯವಾಯಿತು. ಇಂಥ ಧ್ಯಾನದಿಂದ ಬುದ್ಧಿಶಕ್ತಿ, ಆರೋಗ್ಯ, ಉತ್ಸಾಹ, ಚಟುವಟಿಕೆ, ಮೇಧಾಪ್ರಜ್ಞೆಗಳು- ಎಲ್ಲವೂ ದೊರಕುವದೆಂದೂ ಈಗಿನ ವಿಜ್ಞಾನಯುಗದಲ್ಲಿ ಶಾಂತಿದಾಂತಿಗಳನ್ನು ಸಾಧಿಸಲು ಇದೇ ಪರಮೌಷಧವೆಂದೂ ಹೇಳಿದರು. ಆದರೆ ಅತೀಂದ್ರಿಯಧ್ಯಾನವು ಇಷ್ಟು ಸುಲಭವಾಗಿಬಿಟ್ಟಿತೆ ? ಹಾಗಾದರೆ ಹಿಂದಿನ ಕಾಲದವರು ಸುಮ್ಮನೆ ಕಾಡಿಗೇಕೆ ಹೊಗುತ್ತಿದ್ದರು ? ಬೇಕಾದಾಗ ಮನೆಯಲ್ಲೇ ಕೆಲವೇ ನಿಮಿಷಗಳಲ್ಲಿ ಸಾಧಿಸಬಹುದಾದ ಈ ಸಾಧನಕ್ಕಾಗಿ ಜೀವಮಾನವನ್ನೆಲ್ಲ ಏಕೆ ಮುಡುಪಾಗಿಡುತ್ತಿದ್ದರು ? ಎಂದು ನನಗೆ ಸಂದೇಹವಾಗಿದೆ. ತಮ್ಮ ಉತ್ತರವೇನು ?" ಎಂದು ನೀವು ಬರೆದಿರುವ ಪತ್ರವು ತಲುಪಿದೆ.

"ಸುಮ್ಮನಿದ್ದವನನ್ನು ಬ್ರಹ್ಮನೂ ಗೆಲ್ಲಲಾರ" ಎಂಬ ಗಾದೆಯನ್ನು ನೀವು ಕೇಳಿದ್ದೀರಲ್ಲವೆ ? ಅದೇ ಇದು. ಕೇವಲ ಸುಮ್ಮನಿರುವದಕ್ಕಾಗಿ ಕಾಡಿಗೆ ಹೋಗಬೇಕೆ ? ಉಪವಾಸಮಾಡಬೇಕೆ ? ಎಂಬ ಪ್ರಶ್ನೆಗಳಿಗೆ ನೀವೇ ಉತ್ತರಹೇಳಬೇಕು; ಎಂದರೆ 'ಈ ಕೆಲಸ ಸುಲಭ' ಎಂದು ಬಾಯಲ್ಲಿ ಹೇಳಿದರೂ ಮಾಡುವದು ಅಷ್ಟೇ ಕಷ್ಟ. ನಮ್ಮ ಮನಸ್ಸು ಎಚ್ಚರವಾಗಿದ್ದಾಗ ಪ್ರತಿಕ್ಷಣವೂ ಚಂಚಲವಾಗಿರುತ್ತದೆ. ಕನಸಿನಲ್ಲಿಯೂ ದೃಶ್ಯಗಳನ್ನು ಕಾಣುತ್ತಾ ಸುಖದುಃಖಗಳಿಗೆ ಈಡಾಗಿರುತ್ತದೆ. ಅಲ್ಲಿಯೂ ಅದಕ್ಕೆ ಶಾಂತಿಯಿಲ್ಲ. ಇನ್ನು ಗಾಢನಿದ್ರೆಯಲ್ಲಿ ತಾನೇ ಇಲ್ಲವಾಗಿ ಲಯವಾಗಿಬಿಡುವದು. ಇಷ್ಟು ಹೊರತು ತಾನಿದ್ದುಕೊಂಡು ಸುಮ್ಮನೆ ಇರುವದೊಂದು ಮಾತ್ರ ಅದಕ್ಕೆ ಬರುವದಿಲ್ಲ. ಮನಸ್ಸು ಎಂದರೆ ದ್ವೈತ ಎಂದರ್ಥ. ದ್ವೈತ ಎಂದರೆ ಅಶಾಂತಿ- ಎಂದು ತಿಳಿಯಬೇಕು. ಹೀಗಿರುವದರಿಂದಲೇ ಋಷಿಗಳು ಉಪದೇಶಿಸಿದ ಧ್ಯಾನವು ಏನನ್ನೂ ಚಿಂತಿಸುವದಲ್ಲ. ಹಾಗೆ ಚಿಂತಿಸಿದರೆ ಅಥವಾ ಮನಸ್ಸನ್ನು ಹಿಡಿಯಹೊರಟರೆ ಅಶಾಂತಿಯೇ ಗತಿ. ಆದ್ದರಿಂದ ಏನನ್ನೂ ಚಿಂತಿಸದೆ ಸುಮ್ಮನಿರುವದೇ ನಿಜವಾದ ಧ್ಯಾನವು. ಅದೇ ಸಮಾಧಿಯು-ಎಂದು ಅವರು ತಿಳಿಸಿರಬೇಕು. ಆ ತೂಷ್ಣೀಮವಸ್ಥೆಯು ವ್ಯಾವಹಾರಿಕವಾಸನೆಯ ಮನಸ್ಸಿಗೆ ಒಗ್ಗುವ ವಿಷಯವಲ್ಲ. ಅದಕ್ಕಾಗಿಯೇ ಮನಸ್ಸನ್ನು ಹದಗೊಳಿಸಬೇಕು. ಈ ಸಂದರ್ಭದಲ್ಲಿ ಋಷಿಗಳು ತಮ್ಮ ಅನುಭವಪೂರ್ಣವಾದ ಸಾಧನಬಲದಿಂದ ಹೊಸ ಸಾಧಕರಿಗೆ ಕೆಲವು ಸೂಚನೆಗಳನ್ನು ನೀಡಿ ದೀಕ್ಷೆಯನ್ನು ಕೊಟ್ಟಿದ್ದರೆ ತಪ್ಪೇನು ?

ಈಗ ರೋಗಪರಿಹಾರಾದಿಫಲಗಳು ಧ್ಯಾನದಿಂದ ದೊರಕುವ ಬಗ್ಗೆ ವಿಚಾರ ಮಾಡಬಹುದು. ಮಾನವನ ಶರೀರವೇ ರೋಗಮಯವಾಗಿದೆ. ಇದರಲ್ಲಿರುವ ತ್ರಿಧಾತುಗಳ ವೈಷಮ್ಯವು ರೋಗವೆನಿಸುವದು. ಏನೂ ಚಿಂತಿಸದೆ ಇರುವಾಗ 'ಈ ಶರೀರವು ನಾನು' ಎಂಬಿದೂ ಮರೆತುಹೋಗುವದರಿಂದ ಆ ಕಾಲಕ್ಕೆ ರೋಗ ಗಳಿಂದ ಬಿಡುಗಡೆಯಾಗುವದು ಸಹಜವೇ ಆಗಿದೆ. ಧ್ಯಾನದಿಂದ ಬಹಿರ್ಮುಖ ನಾದಾಗ ಮನಸ್ಸಿಗೆ ಒಂದು ರೀತಿಯ ಶಕ್ತಿಯು ಬಂದಿರುತ್ತದೆಯಾಗಿ ಅದು ಶಾರೀರಕದೌರ್ಬಲ್ಯಗಳನ್ನು ಹಿಮ್ಮೆಟ್ಟಿಸಿರುತ್ತದೆ. ಇದೇ ರೋಗವು ಗುಣವಾಗು ತ್ತಿರುವದರ ಗುರುತು. ಆದರೆ ಪೂರ್ಣವಾಗಿ ರೋಗಗಳು ಹೋಗಿಬಿಟ್ಟವೆ- ಎಂದು ಮಾತ್ರ ತಿಳಿಯಬಾರದು. ಏಕೆಂದರೆ ಮೂಗು ಇರುವವರೆಗೂ ನೆಗಡಿ ಇರುವಂತೆ (ಅಥವಾ ನೆಗಡಿಯ ಭಯವಾದರೂ ಇರುವಂತೆ) ಶರೀರವಿರುವವರೆಗೂ ರೋಗ ಗಳಿದ್ದೇ ಇರುವವು. ಇದು ಋಷಿಗಳಿಗೂ ಅನ್ವಯಿಸುತ್ತದೆ. ಆದ್ದರಿಂದ ತಾತ್ಕಾಲಿಕ ವಾಗಿ ರೋಗಪರಿಹಾರಕ್ಕೆ ಶರೀರವನ್ನು ಮರೆಯುವದೊಂದೇ ಗತಿ. ಅದಕ್ಕೆ ಏನನ್ನೂ ಚಿಂತಿಸದೆ ಇರುವ ಧ್ಯಾನವೊಂದೇ ಮಾರ್ಗವು. ಇನ್ನು ಡಾಕ್ಟರುಗಳು ಕೂಡ ಧ್ಯಾನದಿಂದ ರೋಗಗಳು ಕಡಿಮೆಯಾದದ್ದನ್ನೂ ವಾಸಿಯಾದದ್ದನ್ನೂ ಗುರುತಿಸಿದಲ್ಲಿ ಅದು ರೋಗಿಯ ಮನಃಸ್ಥೈರ್ಯಕ್ಕೆ ಹಿಡಿದ ಕನ್ನಡಿಯೇ ಸರಿ. ಮನಸ್ಸಿನ ಶಾಂತಿ, ಸ್ಥೈರ್ಯ, ಏಕಾಗ್ರತೆ, ಆತ್ಮಚಿಂತನೆಗಳು- ಎಲ್ಲಾ ಶಾರೀರಕ ಮಾನಸಿಕ ರೋಗಗಳಿಗೂ ರಾಮಬಾಣವಾಗಿರುವವು. ಉದಾಹರಣೆಗೆ ಯುದ್ಧ ರಂಗದಲ್ಲಿ ಬಾಣಗಳಿಂದ ಜರ್ಝರಿತವಾಗಿ ಉರುಳಿದ ಶರೀರವನ್ನು ಭೀಷ್ಮರು ಮನಃ ಸ್ಥೈರ್ಯದಿಂದ ಹದಗೊಳಿಸಿ ಉತ್ತರಾಯಣವು ಬರುವವರೆಗೂ ನಿಲ್ಲಿಸಿಕೊಳ್ಳ ಲಿಲ್ಲವೆ? ಆಗ್ಗೆ ಅವರಿಗೆ ಕೃಷ್ಣಚಿಂತನೆಯೊಂದು ಹೊರತು ಬೇರೇನು ಚಿಕಿತ್ಸೆಯಿತ್ತು?

ಆದ್ದರಿಂದ ನೀವು ಅತೀಂದ್ರಿಯಧ್ಯಾನರಹಸ್ಯದ ಬಗ್ಗೆ ಸಂಶಯಪಡಬೇಡಿರಿ. ಅದು ಅಪ್ಪಟವಾದ ಅಧ್ಯಾತ್ಮಸಾಧನವಾಗಿದೆ. ಆದರೆ ನಿಮ್ಮ ಅಭಿಪ್ರಾಯದಂತೆ ಯೇ ಅದು ಅಳವಡುವದು ಮಾತ್ರ ಆಯಾ ಮಾನವನ ಮಾನಸಿಕಸ್ಥಿತಿಯನ್ನವ ಲಂಬಿಸಿದೆ. ಪರೆಯು ಬಂದ ಕಣ್ಣನ್ನು ಮಾತ್ರ ಡಾಕ್ಟರು ಆಪರೇಷನ್ ಮಾಡಿ ಕಣ್ಣು ಕಾಣುವಂತೆ ಮಾಡಬಲ್ಲರು. ಆದರೆ ಹುಟ್ಟುಕುರುಡನಾಗಿದ್ದಲ್ಲಿ ಅಥವಾ ಕಣ್ಣೇ ಪೂರ್ತಿಯಾಗಿ ಇಂಗಿಹೋಗಿದ್ದಲ್ಲಿ ಎಂಥ ಡಾಕ್ಟರಿಂದಲೂ ಏನೂ ಆಗಲಾರದು. ಇದು ಡಾಕ್ಟರರ ಅಥವಾ ನೇತ್ರವಿಜ್ಞಾನದ ದೌರ್ಬಲ್ಯವೆಂದಿಗೂ ಅಲ್ಲ. ಇಲ್ಲಿಯೂ ಶ್ರದ್ಧಾಭಕ್ತಿಗಳ ಬಂಡವಾಳವಿಲ್ಲವಾದರೆ ಹಾಗೂ ಸಾಧನಗಳನ್ನು ಮಾಡುವ ಮನಸ್ಸಿಲ್ಲವಾದರೆ ಏನೂ ಮಾಡಲಾಗುವದಿಲ್ಲ. ದುಶ್ಚರಿತಗಳಿಂದ ಹಿಂದಿರುಗದ, ಅಶಾಂತನಾದ, ಪ್ರಜ್ಞಾಹೀನನಿಗೆ ಆತ್ಮನು ದೊರಕುವದಿಲ್ಲ- ಎಂದು ತಿಳಿಯಿರಿ.

———

# ಆರಿಸಿದ ಅರಳುಮೊಗ್ಗುಗಳು

೧. ಬಡವನ ಮಾತಿಗೆ ನೆಂಟರು ಬೆಲೆಕೊಡುವದಿಲ್ಲ. ಅವನ ಶಕ್ತಿಧೈರ್ಯ ಗಳು ಹಾಸ್ಯಕ್ಕೆ ಗುರಿಯಾಗುತ್ತವೆ. ಚಂದ್ರನ ಕಾಂತಿಯು ಹಗಲಿನಲ್ಲಿ ಬಾಡುವಂತೆ ಅವನ ಒಳ್ಳೆಯತನವು ಮಸುಕಾಗುತ್ತದೆ. ಹಗೆತನಕ್ಕೆ ಕಾರಣವಿಲ್ಲದಿದ್ದರೂ ಮಿತ್ರರು ದೂರವಾಗುತ್ತಾರೆ. ಕಷ್ಟಗಳು ಹೆಚ್ಚುತ್ತವೆ. ಬೇರೆಯವರು ಮಾಡಿದ ಪಾಪಕೆಲಸ ಗಳಿಗೂ ಇವನೇ ಹೊಣೆಯಾಗುತ್ತಾನೆ. —ಚಾರುದತ್ತ.

೨. ಮನುಷ್ಯನು ಮನುಷ್ಯನಿಗೆ ದಾಸನಲ್ಲ. ರಾಜನ ಹಣಕ್ಕೆ ಮನುಷ್ಯನು ದಾಸನು. ಅಂತೂ ಧನನಿಮಿತ್ತವಾಗಿ ಗೌರವ ; ಧನವಿಲ್ಲವಾದರೆ ಹಗುರತನ.

೩. ತಿಳಿದವನು ಯಾರಿಗೂ ಸ್ವಲ್ಪ ಹಣವನ್ನೂ ತೋರಿಸಬಾರದು. ಜೋಕೆ! ಏಕೆಂದರೆ ಅದನ್ನು ನೋಡುವದರಿಂದಲೇ ಮುನಿಯ ಮನಸ್ಸೂ ಸಹ ಚಂಚಲವಾಗಿ ಬಿಡುತ್ತದೆಯಲ್ಲವೆ ? —ಪಂಚತಂತ್ರ.

೪. ಸಂಪತ್ತು ನೀಚ ಮತ್ತು ಉತ್ತಮ ಎಂಬ ಅಂತರವನ್ನು ತಿಳಿಯದೆ ಎಲ್ಲ ರನ್ನೂ ಸೇರುತ್ತದೆ. ಯಾರೂ ಸಂಪತ್ತಿಗೆ ಪ್ರಿಯರಾಗಿ ಬಹಳಕಾಲ ಇರುವದು ಸಾಧ್ಯವಿಲ್ಲ. ಆದರೂ ಮೂರ್ಖರು ಸಂಪತ್ತನ್ನು ಗಳಿಸುವದರಲ್ಲಿಯೇ ಆಸಕ್ತರಾಗಿರು ತ್ತಾರೆ. ಏಕೆಂದರೆ ಜನರ ಸ್ವಭಾವವೇ ವಕ್ರ. —ಕಿರಾತಾರ್ಜುನೀಯ.

೫. ಪೂಜೆಗೆ ಅನರ್ಹನಾದವನನ್ನು ಪೂಜೆಮಾಡಿದರೆ, ಯಾರಲ್ಲಿಗೆ ಹೋಗ ಬಾರದೋ ಅವನಲ್ಲಿಗೆ ಹೋದರೆ, ಯಾರಿಗೆ ನಮಿಸಬಾರದೋ ಅವನಿಗೆ ನಮಿಸಿದರೆ ಅದಕ್ಕೆ ಹಣದ ಪ್ರಭಾವವೇ ಕಾರಣ. —ಪಂಚತಂತ್ರ.

೬. ನಾಚಿಕೆ, ಸ್ನೇಹ, ಮಧುರವಾದ ಸ್ವರ, ಬುದ್ಧಿ, ಯೌವನದ ಕಾಂತಿ, ಸ್ತ್ರೀಸಹವಾಸ, ಸ್ವಜನರಲ್ಲಿ ಸಮತ್ವಬುದ್ಧಿ, ದುಃಖವಿಲ್ಲದಿರುವಿಕೆ, ಬೆಡಗು, ಧರ್ಮ, ಶಾಸ್ತ್ರ, ಬೃಹಸ್ಪತಿಯಂಥ ಬುದ್ಧಿಕುಶಲತೆ, ಶುಚಿತ್ವ, ನಡೆವಳಿಕೆಯ ಚಿಂತೆ- ಇವೆಲ್ಲ ಜೀವಿಗಳಿಗೆ ಹೊಟ್ಟೆಯು ತುಂಬಿದ್ದರೆ ಮಾತ್ರ ಉಂಟಾಗುವದು. —ಪಂಚತಂತ್ರ.

೭. ಎಲ್ಲ ಬಗೆಯ ಶುದ್ಧಿಗಳಿಗಿಂತಲೂ 'ಅರ್ಥಶೌಚ'ವು ಶ್ರೇಷ್ಠ. ಅಂದರೆ ಹಣಕಾಸಿನ ವ್ಯವಹಾರಗಳಲ್ಲಿ ಪ್ರಾಮಾಣಿಕನಾಗಿರುವದು. ಯಾರು ಹಣಕಾಸಿನಲ್ಲಿ ಶುಚಿಯಾಗಿಲ್ಲವೋ ಅವನು ನಿತ್ಯಸ್ನಾನಮಾಡಿದರೂ ಶುಚಿಯಿಲ್ಲ. —ಮನುಸ್ಮೃತಿ.

೮. ಎಲೈ ಲಕ್ಷ್ಮಿ, ಹಣಕ್ಕೋಸ್ಕರ ಬಂಧುಗಳನ್ನು ಕೊಲ್ಲುವವನ, ಪರಸ್ತ್ರೀ ಲಂಪಟನ, ಹಿಂಸಾಪರರೊಡನೆ ವ್ಯವಹರಿಸುವವನ, ಮೋಸದಿಂದ ಸಂತೋಷಪಡು ವವನ, ಅಯೋಗ್ಯಮಾತುಗಳನ್ನಾಡುವವನ, ತನ್ನ ಹೊಟ್ಟೆಹೊರೆದುಕೊಳ್ಳುವವನ ಮನೆಗಳಲ್ಲಿ ಕುಣಿಯುತ್ತೀಯೆ; ಈ ನಿನ್ನ ಮತ ಎಲ್ಲಿಯದು ? —ವಿಶ್ವಗುಣಾದರ್ಶ.

# ನರ್ಗಿಸ್-ಕಿ-ಕಹಾನಿ

(ಪತ್ರಿಕಾಪಾಠಕ)

ತಾ॥ 15-3-81ರ 'ಪ್ರಜಾವಾಣಿ' ಪತ್ರಿಕೆಯಲ್ಲಿ ಹಿಂದೀಚಿತ್ರಪ್ರಪಂಚದ ಸುಪ್ರಸಿದ್ಧ ತಾರೆಯಾದ ನರ್ಗಿಸ್- ಎಂಬವಳ ಕರುಣಾಜನಕವೃತ್ತಾಂತವೊಂದು ಬಂದಿತ್ತು. ವಾಚಕರಲ್ಲಿ ಕೆಲವರು ಅದನ್ನು ಓದಿರಬಹುದು. ಆಕೆಗೆ ಸಂಭವಿಸಿದ್ದ ದಾರುಣರೋಗನಿಮಿತ್ತವಾಗಿ ಚಿಕಿತ್ಸೆಗೆಂದು ಅವಳು ಅಮೆರಿಕಾದೇಶಕ್ಕೆ ಹೋಗಿದ್ದಳಂತೆ. ಈಚೆಗೆ ಒಂದು ಪವಾಡವನ್ನೆಸಗಿ ಮೃತ್ಯುವಿನ ಹಿಡಿತದಿಂದ ಪಾರಾಗಿ ಆಕೆಯು ಸ್ವದೇಶಕ್ಕೆ ಹಿಂದಿರುಗಿ ಬಂದಿದ್ದಾಳಂತೆ. ಅವಳಿಗೆ ಉಂಟಾಗಿದ್ದ ಕ್ಯಾನ್ಸರ್ ರೋಗವು ವಾಸಿಯಾಗಲಾರದ ಕಾಹಿಲೆಯಾಗಿತ್ತು. ನ್ಯೂಯಾರ್ಕಿನ ಸ್ಲೋನ್-ಕೇಟರಿಂಗ್ ಸ್ಮಾರಕ ಆಸ್ಪತ್ರೆಯ ತೀವ್ರ ಚಿಕಿತ್ಸಾಘಟಕದಲ್ಲಿ ಈಕೆಯು ಪ್ರಜ್ಞಾಶೂನ್ಯಳಾಗಿ ಮಲಗಿದ್ದಳಂತೆ. ಈಕೆಯನ್ನು ನೋಡಿಕೊಳ್ಳುತ್ತಿದ್ದ ಡಾಕ್ಟರು ಇವಳು ಮರಳಿ ಬದುಕುವ ಸಾಧ್ಯತೆ ಶೇಕಡ ಇಪ್ಪತ್ತರಷ್ಟು ಮಾತ್ರ-ಎಂದು ಖಂಡಿತವಾಗಿ ಹೇಳಿದ್ದರಂತೆ. ಕಟ್ಟಕಡೆಗೆ 'ಅನ್ಯಥಾ ಶರಣಂ ನಾಸ್ತಿ' ಎಂಬಂತೆ ಇವಳ ಪತಿ ಭಗವಂತನನ್ನು ಮೊರೆಹೊಕ್ಕು ಈಕೆಗೆ ಗುಣವಾಗಲೆಂದು ನಿರಂತರವಾಗಿ ಪ್ರಾರ್ಥನೆಯನ್ನು ಸಲ್ಲಿಸಿದನಂತೆ. ಅಲ್ಲಿದ್ದ ಡಾಕ್ಟರರಂತೂ ನಿಜವಾಗಿ ಈಕೆಯು ಗುಣಮುಖಳಾದದ್ದೇ ಆದರೆ ತನ್ನ ಧರ್ಮವನ್ನೇ ಬಿಟ್ಟು ಹಿಂದೂಧರ್ಮಕ್ಕೆ ಸೇರಿಬಿಡುವದಾಗಿ ಪ್ರತಿಜ್ಞೆಮಾಡಿದರಂತೆ. ಅದೇನು ಪವಾಡವೊ, ಪ್ರಾರ್ಥನೆಯ ಫಲವಾಗಿ ಅಲ್ಲಿಯ ಡಾಕ್ಟರರೂ ಆಶ್ಚರ್ಯಪಡುವಂತೆ ಈಕೆಯು ಗುಣಮುಖಳಾಗಿಬಿಟ್ಟಳು. ಎಲ್ಲರಿಗೂ ಇದು ಪರಮಾಶ್ಚರ್ಯವಾಗಿ ಕಂಡಿತು. ಕಡೆಗೆ ಈಕೆಯ ಪತಿಯು ಇವಳಿಗೆ ಚಿಕಿತ್ಸೆ ಮಾಡಿದ ಡಾ॥ ಫಲ್ಕನ್‌ರವರಿಗೆ ಒಂದು ಕೃಷ್ಣನ ವಿಗ್ರಹವನ್ನು ತರಿಸಿ ಬಹುಮಾನವಾಗಿ ಕೊಟ್ಟನಂತೆ. ಈಗಲೂ ಆ ಡಾಕ್ಟರು ಯಾವದಾದರೂ ಶಸ್ತ್ರಚಿಕಿತ್ಸೆಗೆ ಮುನ್ನ ಶ್ರೀಕೃಷ್ಣನ ವಿಗ್ರಹದ ಮುಂದೆ ನಿಂತು ಪ್ರಾರ್ಥಿಸಿ ತಮ್ಮ ಕೆಲಸವನ್ನಾರಂಭಿಸುತ್ತಾರಂತೆ. ಸ್ವದೇಶಕ್ಕೆ ಮರಳಿದ ನರ್ಗಿಸಳು ಪೂರ್ಣವಾಗಿ ಗವಭದನುಗ್ರಹದಿಂದಲೇ ಬದುಕಿದುದಾಗಿ ಹೇಳಲಾಗುತ್ತಿದೆ. ಈ ಕಲಿಯುಗದಲ್ಲಿಯೂ ಅದರಲ್ಲಿಯೂ ಸಿನೆಮಾಪ್ರಪಂಚದ ಜನರಲ್ಲಿ ಇಂಥ ಭಗವದ್ಭಕ್ತಿಯ ಆದರ್ಶವೂ ಭಗವದನುಗ್ರಹದಿಂದ ಕ್ಷಿಪ್ರಫಲವೂ ಪ್ರತ್ಯಕ್ಷವಾಗಿ ಕಂಡುಬಂದಿರುವದು ಎಂಥ ನಾಸ್ತಿಕರಿಗೂ ಸವಾಲಾಗಿರುತ್ತದೆ. ಇನ್ನು ಆಸ್ತಿಕರಿಗೂ ಭಗವದ್ಭಕ್ತರಿಗೂ ಈ ಸುದ್ದಿಯು ರೋಮಾಂಚವನ್ನುಂಟುಮಾಡಿದ್ದಲ್ಲಿ ಆಶ್ಚರ್ಯವೇನಿದ್ದೀತು ?

ನರ್ಗಿಸಳ ಬಹಿರಂಗಜೀವನವು ಸಿನೆಮಕ್ಷೇತ್ರವಾಗಿರಬಹುದು. ಅಲ್ಲಿ ಆಕೆಯು ಎಲ್ಲರಂತೆಯೇ ಐಹಿಕಜೀವನಕ್ಕಾಗಿ ವೇಷಗಳನ್ನು ಧರಿಸಿ ನಟಿಸಿ ಹಣಕಾಸುಗಳನ್ನು ಸಂಪಾದಿಸಿರಬಹುದು. ಆದರೆ ಹಾಗೆ ನಟಿಸುವಾಗ ಅವಳಿಗೆ ಈ ಪ್ರಪಂಚವೇ ಭಗವಂತನ ನಾಟಕಶಾಲೆ, ತಾನೂ ಒಬ್ಬಳು ನಿಮಿತ್ತಮಾತ್ರಳಾದ ನಟಿ- ಎಂಬ

ಅರಿವುಂಟಾಗದೆ ಇರಬಹುದು. ಈಗಲಾದರೊ, ಆಕೆಯು ಸಂಪೂರ್ಣವಾದ ಜೀವನವೇ ಭಗವಂತನೆಂಬ ಮಹಾನಟನ ಅಧೀನವೆಂದೂ ಆತನ ದಯೆಯಿಲ್ಲವಾದರೆ ತನ್ನ ಅಸ್ತಿತ್ವವೇ ಇರಲಾರದೆಂದೂ ಮನದಟ್ಟಾಗಿರಬೇಕು. ಮತ್ತು ತನ್ನದು ಎಂದು ಭಾವಿಸಿಕೊಂಡಿದ್ದ ರೂಪ, ಯೌವನ, ಧನ, ಜನ, ಕೀರ್ತಿ, ಪ್ರತಿಷ್ಠೆ, ಸೆಂಟರಿಷ್ಟರು, ರಸಿಕವೃಂದ- ಮುಂತಾದವರಾಗಲೀ ತನ್ನ ಅಭಿನಯಕಲಾಕೌಶಲವಾಗಲೀ ಯಾವ ದೊಂದೂ ತನ್ನನ್ನು ಮೃತ್ಯುವಿನ ಬಾಯಿಂದ ಕಾಪಾಡಲು ಸಮರ್ಥವಾಗಲಿಲ್ಲವೆಂದೂ ಯಾವ ಡಾಕ್ಟರಾಗಲೀ ಔಷಧಿಗಳಾಗಲೀ ಭಗವಂತನ ಕೃಪೆ ಎಂಬ ಭೇಷಜದ ಮುಂದೆ ಹಾಯಲಾರದೆಹೋಯಿತೆಂದೂ ತಿಳಿದಿರಬಹುದು. ತನ್ನ ಪತಿಯೂ ಕಡೆ ಗಾಲದಲ್ಲಿ ತನ್ನ ಮೇಲಿದ್ದ ಪ್ರೇಮವನ್ನು ಅತ್ತ ಸರಿಯಿಸಿ ಅದನ್ನೇ ಭಗವಂತನಲ್ಲಿ ಕೇಂದ್ರೀಕರಿಸಿದ್ದರ ಫಲವಾಗಿ ತಾನು ಬದುಕುವಂತಾಯಿತೆಂದೂ ಹಾಗಿಲ್ಲದಿದ್ದರೆ ತನ್ನ ಬಾಳು ಕೊನೆಗಂಡು ಪತಿ-ಪುತ್ರಾದಿಗಳನ್ನಗಲಿ ತಾನು ಇಹಲೋಕವ್ಯಾಪಾರ ವನ್ನೇ ಮುಗಿಸಿಬಿಡಬೇಕಾಗುತ್ತಿತ್ತೆಂದೂ ಯೋಚಿಸಿರಬಹುದು. ಹೀಗೆ ಚಿಂತಿಸಿ ದಲ್ಲಿ ಇದು ನರ್ಗಿಸಳೊಬ್ಬಳ ಕಥೆಯಲ್ಲ. ನಮ್ಮೆಲ್ಲರ ಕರುಣಾಜನಕ ಕಥೆಯೂ ಇಷ್ಟೇ ಆಗಿರುತ್ತದೆ.

ಈಗಿನ ಭೌತಿಕವಿಜ್ಞಾನದ ಮುನ್ನಡೆಯ ಪ್ರಪಂಚದಲ್ಲಿ ಜನರು ದೇವರನ್ನು ಮರೆತಿರುವದು ಹೆಚ್ಚಾಗಿರಬಹುದು. ಆದರೆ ದೇವರು ಮಾತ್ರ ತಾನು ಸೃಷ್ಟಿಸಿರುವ ಪ್ರಪಂಚವನ್ನಾಗಲೀ ಜನರನ್ನಾಗಲೀ ಮರೆತಿಲ್ಲ. ಹೀಗಿದ್ದರೂ ಅವನು ಎಲ್ಲರನ್ನೂ ಬದುಕಿಸುವದು ಸಾಧ್ಯವಿಲ್ಲ. ಏಕೆಂದರೆ ಅವನ ಆವಶ್ಯಕತೆಯನ್ನಾಗಲೀ ಅಸ್ತಿತ್ವ ವನ್ನಾಗಲೀ ಮನಸ್ಸಿಗೂ ತಂದುಕೊಳ್ಳದಂಥ ಪಾಮರರಿಗೆ ಅವನಾದರೂ ಸಹಾಯ ಮಾಡುವದು ಹೇಗಾದೀತು? ಸೂರ್ಯನು ಬೆಳಗುತ್ತಿದ್ದರೂ ಅವನಿಗೆ ಬೆನ್ನುತಿರುಗಿಸಿ ಕಣ್ಣುಮುಚ್ಚಿ ಕುಳಿತವನಿಗೆ ಸೂರ್ಯನು ಹೇಗೆತಾನೆ ಬೆಳಕನ್ನುಂಟುಮಾಡಿಯಾನು? ಆದ್ದರಿಂದ ನಾವು ಈಗಲೂ ಭಗವಂತನ ಸಹಾಯವನ್ನು ಪಡೆಯಬೇಕೆನಿಸಿದರೆ ಕಿಂಚಿತ್ತಾದರೂ ಆತನನ್ನು ನೆನೆಯಬೇಕು. ಅವನಲ್ಲಿ ನಂಬಿಕೆಯನ್ನೂ ಶ್ರದ್ಧೆಯನ್ನೂ ಇಡಬೇಕು. ಹಾಗಾದರೆ ಅವನು ನಮ್ಮನ್ನು ಕಾಪಾಡುವನು. ಭಗವಂತನನ್ನು ನಂಬಿದವರಿಗೂ ಕಷ್ಟಕಾರ್ಪಣ್ಯಗಳು ಬರಬಹುದು. ಆದರೆ ಅವೆಲ್ಲ ಭಕ್ತರನ್ನು ಪರೀಕ್ಷಿಸುವಸಲುವಾಗಿಯೇ ಸಂಭವಿಸುವವು. ಭಕ್ತರನ್ನು ಪರೀಕ್ಷೆಮಾಡುವ ಅಧಿಕಾರ ಭಗವಂತನಿಗೆ ಇದೆ. ಇದರೆ ಭಕ್ತರನ್ನು ಕೆಡಿಸುವ ಅಧಿಕಾರವು ಅವನಿಗೂ ಇಲ್ಲ. ಈವರೆಗೂ ಹರಿಯನ್ನು ನಂಬಿ ಕೆಟ್ಟವರು ಯಾರೂ ಕಂಡುಬಂದಿಲ್ಲ. ಆದ್ದರಿಂದ ನಾವು ಪ್ರತಿಯೊಂದು ಕಾರ್ಯಾರಂಭದಲ್ಲಿಯೂ-ನರ್ಗಿಸಳ ಡಾಕ್ಟರು ಪರಿವರ್ತನೆ ಹೊಂದಿದ ಅನಂತರ ಕೃಷ್ಣನನ್ನು ಪ್ರಾರ್ಥಿಸಿಯೇ ಕೆಲಸವನ್ನಾರಂಭಿಸುವಂತೆ- ಭಗವಂತನನ್ನು ನೆನೆದು ಮುಂದುವರಿದರೆ ಜಯಶೀಲರಾಗುವೆವು.

# ಸಚ್ಚಿದಾನಂದಮನನ

(ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು)

೧೬೭. ಒಂದು ಮದುವೆಯ ಸಮಾರಂಭದಲ್ಲಿ ಬಗೆಬಗೆಯ ಭಕ್ಷ್ಯಗಳನ್ನು ಮಾಡಿ ಬೀಗರಿಗೆ ಬಡಿಸಿದ್ದರು. ಆದರೆ ಆ ಬೀಗರು ಮೊದಲೇ ಫಲಾಹಾರ, ಕಾಫಿ-ಮುಂತಾದವುಗಳಿಂದ ತೃಪ್ತರಾಗಿದ್ದರು. ಆದ್ದರಿಂದ ಅವರು ಎಲೆಗೆ ಬಡಿಸಿದ್ದನ್ನು ಅತ್ತಿತ್ತ ಸರಿಯಿಸುವದು, ಭಕ್ಷ್ಯಗಳಲ್ಲಿ ದೋಷವನ್ನು ಕಂಡುಹಿಡಿಯುವದು, ಅಥವಾ ಯಾವದೋ ರಾಜಕೀಯಮಾತುಗಳಿಂದ ಕಾಲಹರಣಮಾಡುವದು- ಹೀಗೆ ಕಾಲ ಕಳೆಯುತ್ತಿದ್ದರು. ಹಾಗೆಯೇ ಅಧ್ಯಾತ್ಮದ ಹಸಿವಿಲ್ಲದವರಿಗೆ, ಪ್ರಾಪಂಚಿಕವಿಷಯ ಸೇವನೆಯಿಂದಲೇ ಅಜೀರ್ಣವಾಗಿರುವವರಿಗೆ-ವೇದಾಂತವಿಚಾರಗಳನ್ನು ಮುಂದಿಟ್ಟರೂ ಅವರು ಬೇರೆಯ ವಿಷಯಗಳ ಮಾತನ್ನು ಪ್ರಸ್ತಾಪಿಸುವದು, ಉಪದೇಶಕರ ಜಾತಿಕುಲಗಳನ್ನು ವಿಚಾರಿಸುವದು, ಅಥವಾ ಅವರ ಭಾಷೆಯಲ್ಲಿ ವ್ಯಾಕರಣದೋಷಗಳನ್ನು ಹುಡುಕುವದು-ಮುಂತಾದ ರೀತಿಯಿಂದ ಉದಾಸೀನರಾಗಿರುತ್ತಾರೆ.

೧೬೭. ಹರಿಕಥೆ, ಉಪನ್ಯಾಸಗಳನ್ನು ಕೇಳುವದಕ್ಕೆ ಬಂದಿರುವವರಲ್ಲಿ ಅನೇಕರು ಆ ಕಲಾವಿದರ ರೂಪು, ವೇಷ, ವಿದ್ಯೆ, ಸಂಗೀತ- ಮುಂತಾದವುಗಳನ್ನು ನೋಡುವದರಲ್ಲಿಯೇ ಕಾಲಕಳೆಯುವರು. ಕೆಲವರು ಚೆನ್ನಾಗಿ ತೂಕಡಿಸಿ ನಿದ್ರೆಮಾಡಿಬಿಡುವರು. ಅನೇಕರಿಗೆ ಉಪಕಥೆಯು ಮಾತ್ರವೇ ಬೇಕಾಗಿರುವದು. ಇಂಥವರಿಗೆ ಅಧ್ಯಾತ್ಮದ ಸವಿಯಾಗಲಿ ಭಗವತ್ಪ್ರೇಮವಾಗಲಿ ಇಲ್ಲವೆಂದು ಹೇಳಬಹುದು. ಯಾರು ನಿಜವಾಗಿ ಮುಮುಕ್ಷುಗಳಾಗಿರುವರೋ ಅಂಥವರಿಗೆ ಮಾತ್ರವೇ ಭಗವಂತನ ಗುಣಲೀಲೆಗಳ ವಿಚಾರವೂ ತತ್ತ್ವವೂ ರುಚಿಸುವದು.

೧೬೮. ಪುರಾಣಶ್ರವಣ, ಭಜನೆ, ನಾಮಸ್ಮರಣೆ, ಸಾಧನಗಳ ಅನುಷ್ಠಾನ- ಇವು ಯಾವನಿಗೆ ರುಚಿಸುವದಿಲ್ಲವೋ, ಇವುಗಳನ್ನು ಮಾಡುತ್ತಿರುವವರನ್ನೂ ಯಾವನು ಹಾಸ್ಯಮಾಡುತ್ತಿರುವನೋ ಅಂಥವನಿಗೆ ಅಧ್ಯಾತ್ಮದ ಅಭಿಲಾಷೆ ಇಲ್ಲವೆಂದೇ ನಿಶ್ಚಯಿಸಬೇಕು. ಊಟದವೇಳೆಗೆ ಸರಿಯಾಗಿ ಪೇಟೆಗೆ ಹೋಗಬೇಕೆಂದು ನಿತ್ಯವೂ ಜನರನ್ನು ಕರೆಯುತ್ತಿರುವವನಿಗೆ ಅಗ್ಗಿ ಹಸಿವಾಗಿಲ್ಲವೆಂದೇ ನಿಶ್ಚಯಿಸಬೇಕಷ್ಟೆ !

೧೬೯. ಪ್ರಪಂಚದಲ್ಲಿರುವ ಎಲ್ಲಾ ಪದಾರ್ಥಗಳೂ ಗುಣತ್ರಯಗಳ ಕಾರ್ಯವೆಂದು ಸಾಂಖ್ಯರು ಹೇಳುತ್ತಾರೆ. ಸಾಮಾನ್ಯ ಮನುಷ್ಯನ ಅಂತಃಕರಣದಲ್ಲಿ ಈ ಮೂರೂ ಗುಣಗಳು ಬೆರೆತುಕೊಂಡೇ ಇರುವವು. ಹೊಲವನ್ನು ಚೆನ್ನಾಗಿ ಉತ್ತು ಹರಗದೆ ಇರುವಲ್ಲಿ ಕಳೆಯು ಬೆಳೆಯುವದು ಸ್ವಾಭಾವಿಕವಷ್ಟೆ; ಹಾಗೆಯೇ ಯಾವ ಸಂಸ್ಕಾರವೂ ಇಲ್ಲದ ಪ್ರಾಪಂಚಿಕರ ಮನಸ್ಸಿನಲ್ಲಿ ಈ ಗುಣಗಳ ಮಿಶ್ರಣವೇ ಇರುತ್ತದೆ.

---

# ಉಪೈತು ಮಾಂ ದೇವಸಖಃ

(ಅಧ್ಯಾತ್ಮವಿದ್ಯಾಪ್ರವೀಣ ವೇ|| ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿಗಳು)

ಶ್ರೀಸೂಕ್ತದ ಆರನೆಯ ಋಕ್ಕನ್ನು ಈಗ ವಿಚಾರಮಾಡಬೇಕಾಗಿದೆ. ಅದು ಹೀಗಿದೆ :

ಆದಿತ್ಯವರ್ಣೇ ತಪಸೋಽಧಿಜಾತೋ ವನಸ್ಪತಿಸ್ತವ ವೃಕ್ಷೋಽಥ ಬಿಲ್ವಃ ।
ತಸ್ಯ ಫಲಾನಿ ತಪಸಾ ನುದಂತು ಮಾಯಾಂತರಾಯಾಶ್ಚ ಬಾಹ್ಯಾ ಅಲಕ್ಷ್ಮೀಃ ॥

"ಎಲೈ ಆದಿತ್ಯವರ್ಣಳೆ, ನಿನ್ನ ತಪಸ್ಸಿನಿಂದ ಹುಟ್ಟಿದ ಬಿಲ್ವವೆಂಬ ವನಸ್ಪತಿಯ ಫಲಗಳು ನನ್ನ ಒಳಗಿನ ಹಾಗೂ ಹೊರಗಿನ ಅಲಕ್ಷ್ಮಿಯನ್ನು ನಿವಾರಣೆಮಾಡಲಿ"

ಈ ಮಂತ್ರದಲ್ಲಿ ಲಕ್ಷ್ಮಿಯನ್ನು ಸೂರ್ಯನಂತೆ ಹೊಂಬಣ್ಣದ ಹಾಗೂ ಕಾಂತಿ ಯುಕ್ತವಾದ ಸ್ವಚ್ಛವಾದ ವರ್ಣವುಳ್ಳವಳೆಂದು ಸಂಬೋಧಿಸಲಾಗಿದೆ. ಇಂಥ ಮಹಾ ಲಕ್ಷ್ಮಿಯೆ, ನಿನ್ನ ತಪಸ್ಸಿನ ಫಲವಾಗಿ ಒಂದು ವನಸ್ಪತಿಯು ನಿನ್ನ ಕೈಯಲ್ಲಿಯೇ ಹುಟ್ಟಿತಲ್ಲವೆ ? ಅದು- ಎಂದರ್ಥ. ವನಸ್ಪತಿ ಎಂದರೆ ಹೂವು ಬಿಡದೆ ಹಣ್ಣಾಗುವ ಮರಗಳು ಎಂದಭಿಪ್ರಾಯ. ಬಿಲ್ವವು ಅಂಥ ವನಸ್ಪತಿಯಾಗಿರುತ್ತದೆ. ಈ ಬಿಲ್ವ ವೃಕ್ಷಕ್ಕೆ ಶ್ರೀವೃಕ್ಷವೆಂದೇ ಹೆಸರಿರುತ್ತದೆ. ಇದು ಮಹಾಲಕ್ಷ್ಮಿಯ ಕರಕಮಲದಿಂದ ಹುಟ್ಟಿರುತ್ತದೆ-ಎಂದು ಪುರಾಣದಲ್ಲಿ ತಿಳಿಸಿರುತ್ತದೆ. ಇಂಥ ಪವಿತ್ರವಾದ ಬಿಲ್ವ ಫಲವು ನಿನ್ನ ಅನುಗ್ರಹದಿಂದ ಒಳಗಿನ ಇಂದ್ರಿಯಗಳಿಗೆ ಸಂಬಂಧಪಟ್ಟ ಅಜ್ಞಾನ ವನ್ನೂ ಅದರ ಕಾರ್ಯಗಳನ್ನೂ ಮತ್ತು ಹೊರಗಿನ ಇಂದ್ರಿಯಗಳಿಗೆ ಸಂಬಂಧಿಸಿದ ಅಲಕ್ಷ್ಮಿಯನ್ನೂ ನಾಶಗೊಳಿಸಲಿ-ಎಂದು ಇಲ್ಲಿ ಪ್ರಾರ್ಥಿಸಲಾಗಿದೆ. ಇಂದ್ರಿಯ ಗಳಲ್ಲಿ ಹೊಕ್ಕಿರುವ ಅಲಕ್ಷ್ಮಿಯು ಯಾವದೆಂಬುದನ್ನು ವಿಚಾರಮಾಡಬೇಕು. ಇವು ಗಳನ್ನು ಸ್ಮೃತಿಗಳ ಆಚಾರಕಾಂಡಗಳಲ್ಲಿ ತಿಳಿಸಿರುತ್ತದೆ. ಸುಮ್ಮನೆ ಕೈಕಾಲು ಗಳನ್ನೂ ತೊಡೆಗಳನ್ನೂ ಅಲ್ಲಾಡಿಸುವದು, ಒದರುವದು, ಪೂಜ್ಯವಸ್ತುಗಳೆಡೆಗೆ ಕಾಲನ್ನು ಚಾಚುವದು, ಎರಡೂ ಕೈಗಳನ್ನು ತಲೆಯಮೇಲಿಟ್ಟು ಕೂರುವದು, ಆಗಾಗ್ಗೆ ಮೈಮುರಿಯುವದು, ಹಲ್ಲುಕಿರಿಯುವದು, ನಗುವದು- ಮುಂತಾದ ಅಂಗ ಚೇಷ್ಟೆಗಳು ವಿನಾಕಾರಣವಾಗಿ ಸಂಭವಿಸಿದಲ್ಲಿ ಅವು ಅಲಕ್ಷ್ಮಿಯೆನಿಸುತ್ತವೆ. ಹಾಗೂ ಗೌರವಕ್ಕೂ ಹಾನಿಯನ್ನು ತರುತ್ತವೆ. ಅನೇಕರಿಗೆ ಇದು ತಿಳಿಯುವದೇ ಇಲ್ಲ. ಗಾಂಭೀರ್ಯಕ್ಕೆ ವಿರುದ್ಧವಾದ ಈ ದೋಷಗಳು ಬಹಿರಿಂದ್ರಿಯಗಳಲ್ಲಿ ಅಡಗಿರುವ ಅಲಕ್ಷ್ಮಿಯು- ಎನಿಸುವದು. ಇನ್ನು ಅಂತಃಕರಣದಲ್ಲಿ ಸೇರಿರುವ ಮೌಢ್ಯ, ಆಲಸ್ಯ, ಅವಿದ್ಯೆ-ಮುಂತಾದವು ಆಂತರಿಕ ಅಲಕ್ಷ್ಮಿಯರಾಗಿರುವರು. ಇವರನ್ನೆಲ್ಲ ಮಾನವನು ಗೆಲ್ಲಬೇಕಾದರೆ ಮಹಾಲಕ್ಷ್ಮಿಯ ಪ್ರಸಾದವು ಬೇಕು. ಆಕೆಯು ಅಂಗೈಯಲ್ಲಿ ಧರಿಸಿರುವ ಬಿಲ್ವವೆಂಬುದು ಜ್ಞಾನಕ್ಕೆ ಪ್ರತಿನಿಧಿಯಾಗಿದೆ. ಅದನ್ನು ಶ್ರೀಫಲ ವೆನ್ನುವರು. ಈ ಶ್ರೀಫಲವು ಜ್ಞಾನರೂಪದಿಂದ ನಮಗೆ ದೇವಿಯ ಪ್ರಸಾದವಾಗಿ ದೊರಕಿದಲ್ಲಿ ಅಲಕ್ಷ್ಮಿಯರೆಲ್ಲ ನಾಶವಾಗುವರು. ಆದಕ್ಕೆ ತಪಸ್ಸು ಬೇಕು. ದೇವಿಯು

ಕೂಡ ತಾನೂ ತಪಸ್ಸುಮಾಡಿಯೇ ಸದ್ಗುಣಗಳನ್ನೂ ಜ್ಞಾನವನ್ನೂ ಪಡೆದು ಕೊಂಡಿರುತ್ತಾಳೆ. ಅವಳನ್ನು ನಾವು ಪ್ರಾರ್ಥಿಸಿಕೊಂಡಲ್ಲಿ ತನ್ನ ಭಕ್ತರಿಗೂ ಆಕೆಯು ಅದೇ ತಪಃಫಲವಾದ ಜ್ಞಾನಶಕ್ತಿಯಿಂದ ಅವಿದ್ಯಾಬೀಜಗಳನ್ನು ಕಳೆಯು ತ್ತಾಳೆ- ಎಂದಭಿಪ್ರಾಯ.

ಇಲ್ಲಿ ಬಿಲ್ವವೃಕ್ಷದ ಪ್ರಸ್ತಾಪವಿದ್ದು ಈಗಲೂ ಬಿಲ್ವಪತ್ರೆಮರಗಳನ್ನು ಲಕ್ಷ್ಮಿಯ ವಾಸಸ್ಥಾನವೆಂದು ಗೌರವಿಸುತ್ತಾರೆ. ಬಿಲ್ವವೃಕ್ಷಗಳು ಎಲ್ಲಾ ಕಡೆಗಳಲ್ಲಿಯೂ ಬೆಳೆಯುವದಿಲ್ಲ. ಅವು ಬೆಳೆದ ಜಾಗವು ತಪೋಭೂಮಿಯೆನಿಸುತ್ತದೆ. ಬಿಲ್ವವೃಕ್ಷದ ಕೆಳಗೆ ಕುಳಿತು ಲಕ್ಷ್ಮೀಮಂತ್ರವನ್ನು ಪುರಶ್ಚರಣೆಮಾಡಿದರೆ ಸಿದ್ಧಿಯಾಗುವದೆಂತ ನಂಬಿಕೆಯಿದೆ. ಬಿಲ್ವಮರಗಳನ್ನು ಕಡಿಯಬಾರದೆಂದೂ ಶಿಷ್ಟಾಚಾರವಿದೆ. ಅವು ಗಳನ್ನು ಸುಡುವದೂ ಅಪರಾಧವೆನಿಸುತ್ತದೆ. ಆದರೂ ಕೆಲವು ಅಜ್ಞಜನರು ಇಂಥ ಕೆಲಸಗಳನ್ನು ಮಾಡುತ್ತಾರೆ.ಅಂಥವರಿಗೆ ಅಲಕ್ಷ್ಮಿಯೇ ಅಂಟಿಕೊಳ್ಳುವದು ಖಂಡಿತ. ಇರಲಿ ಬಿಲ್ವವು ಲಕ್ಷ್ಮೀದೇವಿಯ ಪ್ರತಿನಿಧಿಯಾಗಿದೆ. ತುಳಸಿ, ದೆಲ್ಲಿ, ಬಿಲ್ವ-ಈ ಮೂರೂ ಪಾರ್ವತಿ, ಸರಸ್ವತಿ, ಲಕ್ಷ್ಮಿಸ್ವರೂಪರಾದ ದೇವತೆಗಳ ಅಂಶವೆಂದೂ ಅವುಗಳ ಮಾಹಾತ್ಮ್ಯೆಯು ಅಪಾರವಾದುದೆಂದೂ ಪುರಾಣಗಳಲ್ಲಿ ಕಥೆಯಿರುತ್ತದೆ. ಹೀಗೆ ಶ್ರೀವೃಕ್ಷವು ಪೂಜ್ಯವಾಗಿದ್ದು ಬಿಲ್ವಪತ್ರೆಗಳಂತೂ ಶಿವನ ಪೂಜೆಗೆ ಪರಮ ಪವಿತ್ರವಾದ ವಸ್ತುವಾಗಿರುವದು. ಅದರ ಮೂರು ಎಲೆಗಳು ತ್ರಿಗುಣಗಳನ್ನು ಸೂಚಿಸುವವು. ಬಿಲ್ವಪತ್ರೆಸಮರ್ಪಣೆಯು ನಮ್ಮ ತ್ರಿಗುಣಗಳನ್ನೂ ಪರಮೇಶ್ವರನಿಗೆ ಸಮರ್ಪಿಸುವದರ ಪ್ರತೀಕವಾಗಿದೆ. ಅಂತೂ ಶೈವ-ವೈಷ್ಣವ ಸಂಪ್ರದಾಯದವ ರಿಬ್ಬರಿಗೂ ಶ್ರೀವೃಕ್ಷವು ಪೂಜ್ಯವಾಗಿದೆ- ಎನ್ನಬಹುದು.

ಈಗ ಏಳನೆಯ ಮಂತ್ರವನ್ನು ನೋಡೋಣ—

**ಉಪೈತು ಮಾಂ ದೇವಸಖಃ ಕೀರ್ತಿಶ್ಚ ಮಣಿನಾ ಸಹ ।**
**ಪ್ರಾದುರ್ಭೂತೋಽಸ್ಮಿ ರಾಷ್ಟ್ರೇಽಸ್ಮಿನ್ ಕೀರ್ತಿಮೃದ್ಧಿಂ ದದಾತು ಮೇ ॥**

"ಮಹಾದೇವನ ಸಖನಾದ ಕುಬೇರನು ಕೀರ್ತಿ, ಮಣಿಭದ್ರರೊಡನೆ ನನ್ನಲ್ಲಿಗೆ ಬರುವವನಾಗಲಿ; ನಾನು ಈ ರಾಷ್ಟ್ರದಲ್ಲಿ ಹುಟ್ಟಿರುವೆನು. ನನಗೆ (ಈ ದೇವತೆಗಳು) ಕೀರ್ತಿಯನ್ನೂ ಅಭಿವೃದ್ಧಿಯನ್ನೂ ಉಂಟುಮಾಡಲಿ!"

ಈ ಮಂತ್ರದಲ್ಲಿ ಇಡೀ ಜಗತ್ತಿನಲ್ಲಿಯೇ ಅಪರಿಮಿತ ಧನಕನಕಾಧಿಪತಿಯಾದ, ನವನಿಧಿಗಳೊಡೆಯನಾದ, ಮಹಾದೇವನ ಅತ್ಯಂತ ಸ್ನೇಹಿತನಾದ ಕುಬೇರನನ್ನು ಕುರಿತ ಪ್ರಾರ್ಥನೆಯಿದೆ. ಮಹಾವಿಷ್ಣುವು ಲಕ್ಷ್ಮೀಪತಿಯು. ಕುಬೇರನು ಲಕ್ಷ್ಮೀ ಪುತ್ರನು. ಪುತ್ರನಿಗೆ ತಾಯಿಯನ್ನು ಕಾಪಾಡುವದು ಮಾತ್ರ ಕರ್ತವ್ಯವಾಗಿರುತ್ತದೆ. ಆದರೆ ಪತಿಯಾದವನಿಗೆ ಲಕ್ಷ್ಮಿಯನ್ನು ಅನುಭವಿಸುವ ಅಧಿಕಾರವೂ ಇರುತ್ತದೆ. ಮಾನವರಲ್ಲಿ ಬಹುಜನ ಶ್ರೀಮಂತರು ಲಕ್ಷ್ಮೀಪುತ್ರರು ಮಾತ್ರ. ಅವರಿಗೆ ಹಣವನ್ನು ಕಾಪಾಡುವದೊಂದೇ ಉಳಿದಿರುತ್ತದೆ. ಆದರೆ ಅಂಥ ಶ್ರೀಮಂತರಲ್ಲಿ ಸಾವಿರಕ್ಕೊಬ್ಬ

ವಿಷ್ಣುವಿನ ಅಂಶವವನಿರುತ್ತಾನೆ. ಅವನು ಮಾತ್ರ ಲಕ್ಷ್ಮೀಪತಿಯಾಗಿದ್ದು ಭೋಗಿಸುತ್ತಾ ಇತರರಿಗೂ ಅನುಕೂಲಮಾಡಿಕೊಡುತ್ತಾನೆ. ಕುಬೇರನ ಅಂಶವು ಮಾತ್ರ ಇದ್ದವರು ಜಿಪುಣರೆನಿಸುತ್ತಾರೆ. ಮಹಾವಿಷ್ಣುವಿನ ಅಂಶವುಳ್ಳವರು ಉದಾರಿಗಳೂ ದಾನಧರ್ಮಶೀಲರೂ ಪರೋಪಕಾರಿಗಳೂ ಆಗಿರುತ್ತಾರೆ. ಅಂಥವರೇ ಕೀರ್ತಿಶಾಲಿಗಳೂ ಆಗಬಲ್ಲರು. ಆದ್ದರಿಂದ ನಾವು ಮೊದಲು ಕುಬೇರರಾಗುವದು ಸರಿಯಾದರೂ ಅನಂತರ ವಿಷ್ಣುವೂ ಆಗಲು ಪ್ರಯತ್ನಿಸಬೇಕು. ಹೀಗೆ ಕುಬೇರನಿಗೂ ವಿಷ್ಣುವಿಗೂ ಅಂತರವಿದ್ದು ಲಕ್ಷ್ಮಿಯು ಇಬ್ಬರಲ್ಲಿಯೂ ನೆಲಸಿರುತ್ತಾಳೆ. ಇಂಥ ದೇವಸಖನಾದ ಕುಬೇರನು ಮೊದಲು ನಮ್ಮ ಕಡೆಗೆ ಬರಲಿ- ಎಂದರೆ ಆತನ ದರ್ಶನ, ಸಂಗಗಳ ಸಲುವಾಗಿ ನಾವು ಧನವಂತರಾಗೋಣ- ಎಂದಭಿಪ್ರಾಯ. ಕುಬೇರನು ಬರುವಾಗ ಸಪರಿವಾರನಾಗಿಯೇ ಬರಲಿ-ಎಂದೂ ಪ್ರಾರ್ಥನೆಯನ್ನು ಮುಂದುವರಿಸಲಾಗಿದೆ. ಅವನ ಪರಿವಾರದವರಲ್ಲಿ ದಕ್ಷನ ಮಗಳಾದ ಕೀರ್ತಿಯೆಂಬುವಳೂ ಮಣಿಭದ್ರನೆಂಬ ಕೋಶಾಧ್ಯಕ್ಷ (Treasurer)ನೂ ಮುಖ್ಯರು. ಇವರುಗಳೊಡಗೂಡಿಯೇ ಕುಬೇರನು ಬರಲಿ- ಎಂದು ಕೇಳಿಕೊಂಡಿದೆ.

ಕುಬೇರನಂಥ ದೇವತೆಯೂ ಧನಪತಿಯೂ ಎಲ್ಲೆಡೆಗೂ ಬರಲಾರರು. ಅಥವಾ ಅವರು ಬಂದರೆ ಹಾಗೆಯೇ ಏನೂ ವರವನ್ನು ಕೊಡದೆ ಹೋಗಲಾರರು. ಉದಾಹರಣೆಗೆ; ನಮ್ಮ ಭಾರತದೇಶಕ್ಕೆ ಬರುವಂಥ ವಿದೇಶೀಗಣ್ಯರು ದೆಹಲಿಗೆ ಬರುತ್ತಾರೆಯೇ ಹೊರತು ಸಣ್ಣಪುಟ್ಟ ಊರುಗಳಿಗೆ ಬರುವದಿಲ್ಲ. ಹಾಗೇನಾದರೂ ಬಂದರೆ ಆ ಊರಿನಲ್ಲಿ ಏನೋ ಅಭಿವೃದ್ಧಿ, ಬದಲಾವಣೆಗಳು ಸಂಭವಿಸುತ್ತವೆ, ಅಲ್ಲವೆ ? ಹಾಗೆಯೇ ಕುಬೇರನು ನಮ್ಮಲ್ಲಿಗೆ ಬರಲಿರುವದಾದರೆ ನಾನು ಈ ರಾಷ್ಟ್ರದಲ್ಲಿಯೇ ಹುಟ್ಟುವವನಾಗಲಿ ! ಏಕೆಂದರೆ ಕುಬೇರನ ಆಗಮನದಿಂದ ಸಂಪತ್ ಸಮೃದ್ಧಿಯುಂಟಾಗಲಿದ್ದು ತಾನು ಶ್ರೀಮಂತನೇ ಆಗಬಹುದೆಂತ ಭಕ್ತನ ಅಭಿಪ್ರಾಯವಿದೆ. ಕೀರ್ತಿಯನ್ನೂ, ಪುರೋಭಿವೃದ್ಧಿಯನ್ನೂ ಬಯಸುತ್ತಿರುವ ತನಗೆ ಆ ಪರಿವಾರ ಸಹಿತನಾದ ಕುಬೇರನು ಇದೇ ಜನ್ಮಭೂಮಿಯಲ್ಲಿ ಎಲ್ಲ ಸಂಪತ್ತನ್ನೂ ಮಳೆಗರೆಯಲೆಂದು ಪ್ರಾರ್ಥಿಸಿದೆ. ಒಂದು ದೇಶದಲ್ಲಿ ಐಶ್ವರ್ಯವಂತರು ಹೆಚ್ಚಿದಂತೆಲ್ಲ ಅದು ಬಲಿಷ್ಠವಾಗುತ್ತದೆ. ಆದ್ದರಿಂದ ಐಶ್ವರ್ಯವಂತರ ಧನವನ್ನು ಬಡವರಿಗೆ ಹಂಚಿ ಎಲ್ಲರನ್ನೂ ಬಡವರನ್ನಾಗಿ ಮಾಡುವದಕ್ಕಿಂತ ಬಡವರನ್ನೇ ಐಶ್ವರ್ಯವಂತರನ್ನಾಗಿ ಮಾಡುವಂಥ ಯೋಜನೆಗಳನ್ನು ಕೈಗೊಳ್ಳಬೇಕು. ಇದಕ್ಕೆ ಧನಿಕರೂ ಬೆಂಬಲವನ್ನು ನೀಡಬೇಕು. ತನ್ನಂತೆಯೇ ಮತ್ತೊಬ್ಬನೂ ಧನಿಕನಾಗಲಿ ! ಎಂಬ ಉದಾರ ಬುದ್ಧಿಯು ಶ್ರೀಮಂತರಿಗೆ ಮೂಡಿದಾಗ ಅವರು ಶ್ರೀದೇವಿಯ ಮೆಚ್ಚಿನ ಭಕ್ತರಾಗುವದರಲ್ಲಿ ಸಂಶಯವಿಲ್ಲ. ಹಾಗಾಗಲೆಂದು ಹಾರೈಸೋಣ.

---

# ಮಹಾಶಿವರಾತ್ರಿ ವ್ರತ-೨

(ಅಧ್ಯಾತ್ಮವಿದ್ಯಾಪ್ರವೀಣ ಶ್ರೀ|| ಕೆ. ಜಿ. ಸುಬ್ರಾಯಶರ್ಮರು)

ಹಿಂದಿನ ಲೇಖನದಲ್ಲಿ ಮಹಾಶಿವರಾತ್ರಿಯ ವೈಶಿಷ್ಟ್ಯವನ್ನೂ ಆಂತರಿಕಾರ್ಥವನ್ನೂ ತಿಳಿಸಿದ್ದೆನು. ಈಗ ವ್ರತವಿಧಾನವನ್ನು ವಿವರಿಸಲಿದ್ದೇನೆ. ಶಿವಪೂಜೆಯು ಭಕ್ತರಿಗೆ ನಿತ್ಯಕರ್ತವ್ಯವಾದರೂ ವ್ರತರೂಪದಿಂದ ಮಾಡುವದರಲ್ಲಿ ವಿಶೇಷವಿದೆ. ಹೇಗೆ ಗಣಪತಿಯ ಪೂಜೆಯನ್ನು ನಾವು ಪ್ರತಿಯೊಂದು ಕರ್ಮಾರಂಭದಲ್ಲಿಯೂ ಮಾಡಿದರೂ ವರಸಿದ್ಧಿವಿನಾಯಕವ್ರತವನ್ನು ಕುರಿತ ದಿನವೇ ಪ್ರತ್ಯೇಕವಾಗಿ ಮಾಡುವೆವೋ ಹಾಗೆಯೇ ಇದನ್ನೂ ತಿಳಿಯಬೇಕು.

ಶಿವನೆಂಬ ಹೆಸರಿನ ಭಗವಂತನನ್ನು ರಾತ್ರೆ ಪ್ರದೋಷಕಾಲದಲ್ಲಿ ಲಿಂಗದಲ್ಲಿ ಪೂಜಿಸುವದು ಈ ವ್ರತದ ಮುಖ್ಯತಿರುಳಾಗಿದೆ. ಸಂಧ್ಯಾಕಾಲದಲ್ಲಿ ಶಿವನು ತಾಂಡವನರ್ತನವನ್ನು ಕೈಗೊಳ್ಳುವನೆಂದೂ ಅಗ್ಗೆ ಎಲ್ಲಾ ದೇವತೆಗಳೂ ಕೈಲಾಸದಲ್ಲಿ ಸೇರಿರುತ್ತಾರೆಂದೂ ಅವರೆಲ್ಲರೂ ಶಿವನನ್ನೇ ಆರಾಧಿಸುತ್ತಿರುತ್ತಾರೆಂದೂ ಅದೇ ಸಮಯಕ್ಕೆ ನಾವು ಶಿವಪೂಜೆಮಾಡಿದರೆ ಎಲ್ಲಾ ದೇವತೆಗಳನ್ನೂ ಪೂಜಿಸಿದಂತಾಗುತ್ತದೆಯೆಂದೂ ಪುರಾಣಗಳಲ್ಲಿ ತಿಳಿಸಿರುತ್ತದೆ. ಮಹಾಶಿವರಾತ್ರಿಯಂತೂ ಪ್ರದೋಷದಂತೆಯೇ ಅತ್ಯಂತಶ್ರೇಷ್ಠವಾದ ಶಿವಪೂಜಾದಿನವಾಗಿದೆ. ಪ್ರಕೃಷ್ಟವಾದ ದೋಷಾ-ಎಂದರೆ ರಾತ್ರಿಯೇ ಪ್ರದೋಷವು. ಅದನ್ನೇ ಶಿವರಾತ್ರಿಯೆಂದೂ ಕರೆಯಲಾಗಿದೆ. ಚತುರ್ದಶಿ ತಿಥಿಯು ಪ್ರದೋಷವ್ಯಾಪಿನಿಯಾಗಿ ನಿಶೀಥದಲ್ಲಿರುವ ದಿನವೇ ಮಹಾಶಿವರಾತ್ರಿಗೆ ಶ್ರೇಷ್ಠವೆಂದು ಋಷಿಗಳ ಮತವಿದೆ. ಆ ದಿನ ಸಾಧಕನು ಹಗಲೆಲ್ಲ ನಿಯಮದಿಂದಿದ್ದು ಪೂಜಾಸಂಭಾರಗಳನ್ನು ಜೋಡಿಸಿಕೊಂಡು ಸಂಜೆಗೆ ಸ್ನಾನಮಾಡಿ ನಿತ್ಯಾಹ್ನಿಕಗಳನ್ನು ಪೂರೈಸಿಕೊಂಡು ವ್ರತವನ್ನಾರಂಭಿಸಬೇಕು. ವ್ರತವಿಧಾನವನ್ನು ಪೂಜಾಪುಸ್ತಕದಲ್ಲಿ ಕೊಟ್ಟಿದ್ದಾರೆ. ಅದರಂತೆ ಆಚರಿಸಬೇಕು. ಶಿವನು ಅಭಿಷೇಕಪ್ರಿಯನಾದ್ದರಿಂದ ನಮಕ-ಚಮಕ-ಪುರುಷಸೂಕ್ತಗಳಿಂದ ಲಿಂಗಕ್ಕೆ ಅಭಿಷೇಕ ಮಾಡಬೇಕು. ಹೆಚ್ಚಿನ ಮಂತ್ರಗಳು ಬಾರದವರು ನಮಕ-ಚಮಕಗಳಲ್ಲಿ ಒಂದೊಂದು ಅನುವಾಕದಷ್ಟು ಭಾಗವನ್ನಾದರೂ ಕಲಿತು ಶಿವಪೂಜೆಮಾಡಬೇಕು. ಅನಂತರ ಸಹಸ್ರನಾಮ, ಅಷ್ಟೋತ್ತರಶತನಾಮಗಳಿಂದ ಬಿಲ್ವಾರ್ಚನೆಮಾಡಬೇಕು. ಇದೇ ರೀತಿಯಾಗಿ ನಾಲ್ಕು ಯಾಮಗಳಲ್ಲಿಯೂ ಪೂಜಿಸಿ ಪ್ರತಿಯೊಂದು ಯಾಮದ ಪೂಜೆಯನ್ನೂ ಈಶ್ವರನಿಗೆ ಅರ್ಪಿಸಬೇಕು. ಪೂಜೆಯ ಕೊನೆಯಲ್ಲಿ 'ಅರ್ಘ್ಯಪ್ರದಾನ'ವೆಂಬ ಒಂದು ಉಪಚಾರವಿದೆ. ಅದನ್ನೂ ನೆರವೇರಿಸಬೇಕು. ಹೀಗೆ ರಾತ್ರಿಯೆಲ್ಲ ಜಾಗರಣೆ ಮಾಡಿ ಉಪವಾಸವಿದ್ದು ನಾಲ್ಕು ಯಾಮಗಳ ಪೂಜಾಪೂರ್ವಕವಾಗಿ ಈ ವ್ರತವನ್ನು ಸಮಾಪ್ತಿಗೊಳಿಸಬೇಕು. ನಿದ್ರಾಹಾರಗಳು ವರ್ಜ್ಯವಾಗಿರುವ ಈ ವ್ರತಕ್ಕೆ ಸಾಧಕನು ತನ್ನ ಸಂಕಲ್ಪಶಕ್ತಿಯಿಂದಲೂ ಶಿವನ ಅನುಗ್ರಹದಿಂದಲೂ ವ್ರತಭಂಗವಾಗದಂತೆ ನೋಡಿಕೊಂಡು ಅನುಷ್ಠಾನಮಾಡಬೇಕು. ವ್ರತದ ಪ್ರತಿಯೊಂದು

ಯಾಮಪೂಜೆಯ ಕಡೆಯಲ್ಲಿ ಮುಂದೆ ಕೊಟ್ಟಿರುವಂತೆ ಶಿವನನ್ನು ಸ್ತೋತ್ರಮಾಡ ಬೇಕು. ಹೇಗೆಂದರೆ :-

ಜಯ ದೇವ ಜಗನ್ನಾಥ ಜಯ ಶಂಕರ ಶಾಶ್ವತ ।
ಜಯ ಸರ್ವಸುರಾಧ್ಯಕ್ಷ ಜಯ ಸರ್ವಸುರಾರ್ಚಿತ ॥ ೧ ॥
ಜಯ ಸರ್ವಗುಣಾತೀತ ಜಯ ಸರ್ವವರಪ್ರದ ।
ಜಯ ನಿತ್ಯ ನಿರಾಧಾರ ಜಯ ವಿಶ್ವಂಭರಾವ್ಯಯ ॥ ೨ ॥
ಜಯ ವಿಶ್ವೈಕವಂದ್ಯೇಶ ಜಯ ನಾಗೇಂದ್ರಭೂಷಣ ।
ಜಯ ಗೌರೀಪತೇ ಶಂಭೋ ಜಯ ನಿತ್ಯಂ ನಿರಂಜನ ॥ ೩ ॥
ಜಯ ನಾಥ ಕೃಪಾಸಿಂಧೋ ಜಯ ಭಕ್ತಾರ್ತಿಭಂಜನ ।
ಜಯ ದುಸ್ತಾರಸಂಸಾರಸಾಗರೋತ್ತಾರಣ ಪ್ರಭೋ ॥ ೪ ॥

ಎಂಬುದಾಗಿ ಸ್ತೋತ್ರಮಾಡಿ ಜಯಕಾರಗಳನ್ನು ಘೋಷಿಸಬೇಕು. ಹೀಗೆ ವ್ರತವಿಧಿಯನ್ನು ಅನುಸರಿಸಿ ಶಿವರಾತ್ರಿಯ ಪೂಜೆಯನ್ನು ಪೂರ್ಣಗೊಳಿಸಬೇಕು.

ಈ ವ್ರತಕ್ಕೆ ಸಂಬಂಧಪಟ್ಟಂತೆ ಕಥೆಯೊಂದು ವ್ರತಚೂಡಾಮಣಿಯಲ್ಲಿ ಪ್ರಕಾಶಿತ ವಾಗಿದೆ. ಉತ್ತಮೋತ್ತಮವಾದ ಹಾಗೂ ದಾನ-ಧರ್ಮ-ಯಜ್ಞಾದಿಗಳಿಗಿಂತ ಮಿಗಿಲಾದ ವ್ರತವೊಂದನ್ನು ಹೇಳಬೇಕೆಂದು ಪಾರ್ವತಿಯು ಪರಮೇಶ್ವರನನ್ನು ಕೇಳಿದಾಗ ಸದಾಶಿವನು ಹೇಳಿದ ಕಥೆಯಿದು. ಮಾಘ ಕೃಷ್ಣ ಚತುರ್ದಶಿಯಂದು ಭಕ್ತಿಯಿಂದ ತಿಳಿದೊ, ತಿಳಿಯದೆಯೊ, ಶಿವರಾತ್ರಿಯ ಪೂಜೆಯನ್ನು ಮಾಡಿದವರಿಗೆಲ್ಲ ಶ್ರೇಯಸ್ಸು ಲಭಿಸುತ್ತದೆ. ಹೇಗೆಂದರೆ : ಒಬ್ಬ ಬೇಡರವನು ತಾನು ತೀರಿಸಬೇಕಾ ಗಿದ್ದ ಸಾಲದ ನಿಮಿತ್ತ ಸಾಲಗಾರರಿಂದ ಒಂದು ಶಿವದೇವಾಲಯದಲ್ಲಿ ಒಮ್ಮೆ ಕಟ್ಟಿ ಹಾಕಲ್ಪಟ್ಟನು. ಆ ದಿನ ಶಿವರಾತ್ರಿಯಾಗಿದ್ದುದರಿಂದ ಬೆಳಗಿನಿಂದಲೇ ಜನರು ಬಂದು ಶಿವ-ಶಿವ ಎಂದು ನಾಮೋಚ್ಚಾರಣೆಮಾಡಿ ದೇವರನ್ನು ಪೂಜಿಸುತ್ತಿದ್ದರು. ಇದು ಬೇಡನಿಗೆ ತಮಾಷೆಯಾಗಿ ಕಂಡು ತಾನೂ ಶಿವ-ಶಿವ ಎಂದು ಅನುಕರಣೆ ಮಾಡಲಾರಂಭಿಸಿದನು. ಅಲ್ಲಿಂದ ಬಿಡುಗಡೆಯಾದಾಗ ಮೃಗಗಳನ್ನು ಬೇಟೆಯಾಡಲು ಕಾಡಿಗೆ ಹೋದನು. ಯಾವ ಬೇಟೆಯೂ ಸಿಗದೆ ರಾತ್ರಿಯನ್ನು ಕಳೆಯುವ ಸಲುವಾಗಿ ಒಂದು ಮುಳ್ಳಿನ ಮರದಮೇಲೆ ಹತ್ತಿಕುಳಿತನು. ಅದು ಬಿಲ್ವಪತ್ರೆಯ ಮರವಾಗಿತ್ತು. ಕೆಳಭಾಗದಲ್ಲಿಯೇ ಒಂದು ಶಿವಲಿಂಗವಿತ್ತು. ಯಾವದಾದರೂ ಪ್ರಾಣಿಗಳು ಬರಲಿ-ಎಂಬ ಆಸೆಯಿಂದ ಅವನು ಆ ಮರದ ಎಲೆಗಳನ್ನು ಕಿತ್ತು ಶಿವ-ಶಿವ ಎನ್ನುತ್ತಾ ಕೆಳಕ್ಕೆ ಎಸೆಯುತ್ತಿದ್ದನು. ಅದು ಲಿಂಗದಮೇಲೆ ಬೀಳುತ್ತಿತ್ತು. ಆ ದಿನವು ಶಿವರಾತ್ರಿಯಾಗಿದ್ದುದರಿಂದ ಮೊದಲನೆ ಯಾಮದಷ್ಟು ನಿಯಮಿತಕಾಲ ದಲ್ಲಿಯೇ ಅಲ್ಲಿಗೆ ಬಂದ ಒಂದು ಜಿಂಕೆಯನ್ನು ಹೊಡೆಯಲು ಬಾಣವನ್ನು ಹೂಡಿ ದನು. ಅದು ಬೇಡನನ್ನು ಕಂಡು ಮನುಷ್ಯವಾಣಿಯಿಂದ “ಅಯ್ಯ, ನನ್ನನ್ನು ಕೊಲ್ಲ ಬೇಡ, ನಾನು ಗರ್ಭಿಣಿ; ಬೇರೊಂದು ಮೃಗವು ಇಷ್ಟರಲ್ಲೇ ಬರಲಿದೆ! ಅದನ್ನು

ಬೇಟೆಯಾಡು. ಒಂದು ವೇಳೆ ರಾತ್ರಿಯೆಲ್ಲ ಯಾವ ಬೇಟೆಯೂ ನಿನಗೆ ದೊರೆಯದೆ ಹೋದರೆ ಬೆಳಗ್ಗೆ ನಾನೇ ಮರಿಯನ್ನಿಟ್ಟನಂತರ ನಿನ್ನ ಬಳಿಗೆ ಬರುವೆನು. ನಾನು ಮಾತಿಗೆ ತಪ್ಪುವದಿಲ್ಲ. ಹಾಗೆ ತಪ್ಪಿದರೆ ನನಗೆ ಇಂಥಿಂಥ ಪಾಪಗಳು ಬರಲಿ" ಎಂದು ಪ್ರತಿಜ್ಞೆಮಾಡಿ ಹೇಳಿತು. ಪ್ರಥಮಯಾಮದ ಪೂಜಾಫಲವಾಗಿ ಬೇಡನಿಗೆ ಕಾಲುಭಾಗ ಪಾಪವು ಹೋಗಿತ್ತಾದ್ದರಿಂದ ನೋಡೋಣ-ಎಂದು ಆ ಜಿಂಕೆಯನ್ನು ಬಿಟ್ಟುಬಿಟ್ಟನು. ಇದೇ ರೀತಿ ಎರಡನೆ ಯಾಮಕ್ಕೆ ಬಂದ ಜಿಂಕೆಯು ಸಹ ಮಾತ ನಾಡುತ್ತಾ ತಾನು ಮತ್ತೊಂದು ಗರ್ಭಿಣಿ ಜಿಂಕೆಯನ್ನು ಹುಡುಕುತ್ತಿರುವದಾಗಿಯೂ ವಿರಹತಾಪದಿಂದ ಬಳಲಿರುವದರಿಂದ ಕೃಶವಾಗಿದ್ದು ರಕ್ತಮಾಂಸಗಳಿಲ್ಲವಾದ್ದರಿಂದ ಬೇಟೆಯು ತೃಪ್ತಿಯಾಗುವದಿಲ್ಲವಾಗಿ ತನ್ನನ್ನು ಕೊಲ್ಲಬಾರದೆಂದೂ ಒಂದುವೇಳೆ ಬೇಟೆ ಯಾವದೂ ಸಿಗದಿದ್ದರೆ ಬೆಳಗ್ಗೆ ಮತ್ತೆ ತಾನೇ ಬರುವದಾಗಿಯೂ ಪ್ರತಿಜ್ಞೆ ಮಾಡಿ ಕೇಳಿಕೊಂಡಿತು. ಆ ವೇಳೆಗೆ ಅರ್ಧಭಾಗ ಪಾಪವು ಸವೆದಿತ್ತಾದ್ದರಿಂದ ಅದನ್ನೂ ಬೇಡನು ಕೈಬಿಟ್ಟನು. ಮೂರನೆಯ ಯಾಮಕ್ಕೆ ಒಂದು ಗಂಡು ಜಿಂಕೆ ಬಂದಿತು. ಅದೂ ಬೇಡನೊಡನೆ ಮಾತನಾಡಿ ಈಗಾಗಲೆ ಬಂದಿದ್ದ ಎರಡು ಜಿಂಕೆ ಗಳೂ ತನ್ನ ಹೆಂಡತಿಯರೆಂದೂ ಅವರನ್ನು ಕಂಡು ಮಾತನಾಡಿಸಿ ತಾನು ಹಿಂದಿರುಗಿ ಬರುವದಾಗಿಯೂ ಪ್ರತಿಜ್ಞೆಮಾಡಿ ಹೇಳಿತು. ಮುಕ್ಕಾಲು ಭಾಗ ಪಾಪವು ಸವೆದಿ ತ್ತಾದ್ದರಿಂದ ಬೇಡನು ಆ ಜಿಂಕೆಯನ್ನೂ ಕೈಬಿಟ್ಟನು. ನಾಲ್ಕನೆಯ ಯಾಮವು ಕಳೆದು ಬೆಳಗಾದರೂ ಯಾವ ಪ್ರಾಣಿಯೂ ಬರಲಿಲ್ಲ. ಆ ವೇಳೆಗೆ ಬೇಡನಿಗೆ ಸಂಪೂರ್ಣವಾಗಿ ಪಾಪಗಳು ಸವೆದಿದ್ದವು. ಅಷ್ಟುಹೊತ್ತಿಗೆ ಮರಿಹಾಕಿದ ಜಿಂಕೆಯು ತನ್ನ ಮರಿಯನ್ನು ಬೇರೆ ಜಿಂಕೆಗಳಿಗೆ ಒಪ್ಪಿಸಿ ತಾನು ಬೇಡನ ಬಳಿಗೆ ಬಂದಿತು. ಉಳಿದ ಎರಡು ಜಿಂಕೆಗಳೂ ಅದೇ ಕಾಲಕ್ಕೆ ಬಂದು ಸೇರಿದವು. ಎಲ್ಲವೂ ತಮ್ಮನ್ನು ಕೊಂದು ಬೇಟೆಯಾಡುವಂತೆ ಬೇಡನನ್ನು ಕೇಳಿಕೊಂಡವು. ಆಗ ಬೇಡರವನು "ಅಯ್ಯೋ, ನಿಮ್ಮನ್ನು ಹೇಗೆ ಕೊಲ್ಲಲಿ! ನಾನು ಹಿಂಸೆಯನ್ನು ಕೈಬಿಟ್ಟೆನು. ಹೆಂಡತಿ, ಮಕ್ಕಳು, ಬಂಧುಗಳು, ಯಾರೂ ನಮ್ಮವರಲ್ಲ; ನೀವೇ ನನ್ನ ಬಂಧು ಗಳು; ಇದೋ ಈ ಬಿಲ್ಲನ್ನೂ ಬಾಣವನ್ನೂ ಮುರಿದುಹಾಕಿಬಿಡುವೆನು' ಎಂದು ಹೇಳಿ ಮುರಿದು ಎಸೆದುಬಿಟ್ಟನು. ನೀವೆಲ್ಲ ನಿಮ್ಮನಿಮ್ಮ ಜಾಗಕ್ಕೆ ಹೋಗಿರಿ-ಎಂದನು. ಆ ಕೂಡಲೆ ಅಲ್ಲಿ ಪುಷ್ಪವೃಷ್ಟಿಯಾಯಿತು. ಶಿವದೂತರು ವಿಮಾನವನ್ನು ತಂದು ಈ ಬೇಡನನ್ನು ಕುರಿತು 'ಅಯ್ಯಾ, ನೀನು ಶಿವರಾತ್ರಿವ್ರತವನ್ನು ಮಾಡಿ ಪವಿತ್ರ ನಾಗಿರುವೆ; ನಾಲ್ಕು ಯಾಮಗಳ ಪೂಜೆಯು ನಿನಗೆ ಕೈಲಾಸಪ್ರಾಪ್ತಿಯನ್ನುಂಟು ಮಾಡಿದೆ. ಬಾ'-ಎಂದು ಕರೆದರು. ಹಾಗೆಯೇ ಆ ಗಂಡುಜಿಂಕೆಗೆ 'ನೀನು ಪತ್ನೀ ಪರಿವಾರಸಹಿತನಾಗಿ ನಕ್ಷತ್ರಪದವಿಯನ್ನು ಪಡೆದುಕೊ' ಎಂದರು. ಆ ಜಿಂಕೆಗಳ ಗುಂಪೇ ಮೃಗಶಿರಾನಕ್ಷತ್ರಪುಂಜವಾಗಿಬಿಟ್ಟಿತು. ವ್ಯಾಧನು ಅದನ್ನು ಹಿಂಬಾಲಿಸಿ ದನು. ಕಡೆಗೆ ಶಿವಸಾಯುಜ್ಯವನ್ನೂ ಹೊಂದಿದನು. ಹೀಗೆ ಮಹಾಶಿವರಾತ್ರಿಯ ಕಥೆಯೂ ಮಹಿಮೆಯೂ ಪುರಾಣಗಳಲ್ಲಿ ವರ್ಣಿತವಾಗಿದೆ. ನಾವು ಭಕ್ತಿಶ್ರದ್ಧೆಯಿಂದ ಈ ವ್ರತವನ್ನಾಚರಿಸಿದಲ್ಲಿ ಪಾಪವಿನಿರ್ಮುಕ್ತರಾಗಿ ಶ್ರೇಯೋವಂತರಾಗುವದರಲ್ಲಿ ಸಂಶಯವಿಲ್ಲ.

———

# ಜಿಜ್ಞಾಸುಗಳ ಪ್ರಶ್ನೆಗಳಿಗೆ ಉತ್ತರಗಳು

(ಸಂಪಾದಕ)

**ಪ್ರಶ್ನೆ :** ಊಟಕ್ಕೆ ಮೊದಲು ಪರಿಷೇಚನ-ಹಾಗೂ ಉತ್ತರಾಪೋಶನ-ಇವುಗಳ ಅರ್ಥವೇನು ? ಏಕೆ ಮಾಡಬೇಕು ?

**ಉತ್ತರ :** ಪರಿಷೇಚನ-ಎಂದರೆ ನೀರಿನಿಂದ ಸುತ್ತುಗಟ್ಟುವದು-ಎಂದರ್ಥ. ನಾವು ತೆಗೆದುಕೊಳ್ಳುವ ಆಹಾರವನ್ನೆಲ್ಲ ಒಳಗಿರುವ ಜಠರಾಗ್ನಿಗೆ ಆಹುತಿಯೆಂತ ವೈದಿಕರು ಭಾವಿಸುತ್ತಾರೆ. ಈ ಅಭಿಪ್ರಾಯದಲ್ಲಿ ಊಟವೂ ಒಂದು ಯಜ್ಞವಾಗಿದೆ. ವೈದಿಕಕರ್ಮಗಳಲ್ಲಿ ಅಗ್ನಿಗೆ ಆಹುತಿಯನ್ನರ್ಪಿಸುವ ಮುಂಚೆ ಹೇಗೆ ಪರಿಷೇಚನ ಮಾಡುವರೋ ಹಾಗೆಯೇ ಇಲ್ಲಿಯೂ ಜಠರಾಗ್ನಿಯಲ್ಲಿ ಹೋಮಮಾಡುವ ಮುಂಚೆ ಕರ್ಮಾಂಗವಾದ ಪರಿಷೇಚನವನ್ನು ಮಾಡಬೇಕಾಗಿದೆ. ಈ ಪರಿಷೇಚನಕ್ಕೆ ಹಗಲು ಹಾಗೂ ರಾತ್ರಿಗಳಲ್ಲಿ ಬೇರೆಬೇರೆಯಾಗಿ ಉಪಯೋಗಿಸುವ ಮಂತ್ರಗಳ ಅರ್ಥವು ಹೀಗಿದೆ : "ಅಗ್ನಿಯನ್ನು ಋತ ಎಂದರೆ ಮಾನಸಿಕವಾದ ನಿಜ)ವೆನ್ನುವರು. ಆದಿತ್ಯನು ಸತ್ಯ (ಬಾಯಲ್ಲಿ ಆಡುವ ನಿಜ)ನೆನಿಸುವನು. ನಿಜವನ್ನು ವಾಚಿಕವಾಗಿಯೂ ಮಾನಸಿಕವಾಗಿಯೂ ಒಂದರೊಡನೊಂದನ್ನು ಜೋಡಿಸಬೇಕು. ಅದರ ಸಂಕೇತವಾಗಿ ಪರಿಷೇಚನೆಯನ್ನು ವಿಧಿಸಲಾಗಿದೆ. ಅಗ್ನಿ-ಆದಿತ್ಯರೆಂಬವರೇ ಈ ಪ್ರಪಂಚದ ಸಾರಭೂತರಾದ ದೇವತೆಗಳು. ಅನ್ನವು ಬೆಳೆಯುವದಕ್ಕೂ ಹೊಟ್ಟೆಯಲ್ಲಿ ಕರಗುವದಕ್ಕೂ ಇವರಿಬ್ಬರೂ ಕಾರಣರು. ಆದ್ದರಿಂದ ಇವರಿಬ್ಬರನ್ನೂ ಸೇಚನಮಾಡಿದರೆ ಎಂದರೆ ಹಗಲೂ ರಾತ್ರಿಯೂ ಜಲದಿಂದ ಸುತ್ತುಗಟ್ಟಿದರೆ ಅಷ್ಟು ಕಾಲವೂ ಸಾಧಕನು ದುಃಖವಿಲ್ಲದೆ, ಕಷ್ಟವಿಲ್ಲದೆ, ವಿಷಾದವಿಲ್ಲದೆ, ದೈನ್ಯವಿಲ್ಲದೆ ಬದುಕುವನು. ಹಾಗೂ ಕಡಿಮೆಯದ ವಿಭವ (ಐಶ್ವರ್ಯ)ವುಳ್ಳವನಾಗಿ ಚಿರಕಾಲ ಬಾಳುವನು ; ಈ ಜಠರಾಗ್ನಿಹೋತ್ರವನ್ನು ಈ ರೀತಿ ಅರಿತು ಮಾಡುವವನಿಗೆ ಇಂಥ ಫಲಗಳಾಗುವವು" ಎಂದು ತೈತ್ತಿರೀಯಬ್ರಾಹ್ಮಣದಲ್ಲಿ ಹೊಗಳಿದೆ. ಆದ್ದರಿಂದ ಪರಿಷೇಚನವು ಅರ್ಥವತ್ತಾಗಿದೆ.

ಈಗ ಆಪೋಶನದ ವಿವರವನ್ನು ತಿಳಿಯೋಣ. ನೀರನ್ನು ಕುಡಿಯುವದನ್ನು ಆಪೋಶನವೆನ್ನುವರು. ನಾವು ತಿನ್ನುವ ಅನ್ನವು ಅಮೃತವೆನಿಸಿರುವದು. ಅದನ್ನು ಇಡುವಾಗ ಕೆಳಗೆ ಪೀಠವು ಬೇಕಾಗುವದು. ಮೊದಲು ಕುಡಿಯುವ ನೀರು, ಅಮೃತರೂಪವಾದ ಅನ್ನಕ್ಕೆ ಉಪಸ್ತರಣ-ಎಂದರೆ ಹಾಸಿರುವ ಆಸನವು (ರತ್ನಗಂಬಳಿಯಂತೆ). ಊಟವಾದ ಅನಂತರ ತೆಗೆದುಕೊಳ್ಳುವ ಉತ್ತರಾಪೋಶನವು ಅನ್ನಕ್ಕೆ ಹೊದಿಕೆಯು. ಎಂದರೆ ಅಪಿಧಾನ-ಮುಚ್ಚಳವೆಂದು ಕರೆಯಲ್ಪಡುವದು. ಹೀಗೆ ತಿನ್ನುವ ಅನ್ನವು ಅಮೃತರೂಪವಾದ ಫಲವನ್ನುಂಟುಮಾಡಲು ಈ ಆಪೋಶನವು ವಿಧಿಸಲ್ಪಟ್ಟಿದೆ. ಲೌಕಿಕವಾಗಿಯೂ ನಾವು ಆಹಾರನಾಳವನ್ನುಪಯೋಗಿಸುವಾಗ ಮೊದಲು ದ್ರವರೂಪವಾದ ಪದಾರ್ಥವನ್ನು ನುಂಗಿ ಅನಂತರ ಗಟ್ಟಿಯಾದದ್ದನ್ನು ತಿಂದರೆ ತೊಂದರೆ

ಯಾಗುವದಿಲ್ಲ. ಈಗಿನ ಯುವಕರೂ ಮಂತ್ರ ಹೇಳದಿದ್ದರೂ ನೀರು ಕುಡಿಯುತ್ತಲೇ ಊಟಮಾಡುತ್ತಾರಲ್ಲವೆ ? ನೀರಿನ ಪ್ರಾಶನವಿಲ್ಲದೆ ಆಹಾರವನ್ನು ಸ್ವೀಕರಿಸುವದಿಲ್ಲ ವಷ್ಟೆ ? ಅದನ್ನೇ ಪೂರ್ವಿಕರು ಒಂದು ಕರ್ಮವಾಗಿ ಮಾರ್ಪಡಿಸಿದ್ದರು- ಎಂದು ತಿಳಿಯಬಹುದು.

ಇದೇ ಸಂದರ್ಭದಲ್ಲಿ ಇನ್ನೂ ಕೆಲವು ವಿಷಯಗಳನ್ನು ಪ್ರಸ್ತಾಪಿಸಲಿಚ್ಛಿಸು ತ್ತೇನೆ. ಮನುಷ್ಯನಿಗೆ ಈಗ ಒದಗಿರುವ ರೋಗ, ದಾರಿದ್ರ್ಯ, ಹಾಗೂ ಆಹಾರ ಹಂಚಿಕೆಯ ವೈಷಮ್ಯದಿಂದ ಸಂಭವಿಸುತ್ತಿರುವ ಹಸಿವು, ಮುಂತಾದವುಗಳಿಗೆಲ್ಲ ನಾವು ಶಾಸ್ತ್ರವನ್ನು ಮೀರಿರುವದೇ ಕಾರಣವಾಗಿದೆ. ಹೇಗೆಂದರೆ : ನಾವು ಪರಿಷೇಚನಮಾಡದೆ ಏನನ್ನೂ ತಿನ್ನಕೂಡದು ; ಬಾಯನ್ನು ಉಪಯೋಗಿಸಲೂ ಬಾರದು-ಎಂದು ನಿಯಮವನ್ನು ಮಾಡಿಕೊಂಡಲ್ಲಿ ಪ್ರತಿದಿನವೂ ಎರಡು ವೇಳೆ ಮಾತ್ರ ಏನಾದರೂ ತಿನ್ನಬೇಕಾಗುತ್ತದೆ. ಇದನ್ನೇ 'ಎರಡು ಹೊತ್ತು ಉಂಡವನು ಭೋಗಿ' ಎಂಬ ಲೋಕೋಕ್ತಿಯಾಗಿ ಮಾಡಿದ್ದಾರೆ. ಈ ನಿಯಮದಂತೆ ನಡೆದರೆ ನಡುನಡುವೆ ಬಾಯನ್ನುಪಯೋಗಿಸುವ ಸಂದರ್ಭಗಳೆಲ್ಲ ರದ್ದಾಗಿ ನಾಲಗೆಗೆ ಕಡಿವಾಣವಾಗುತ್ತದೆ. ಅದು ಹತೋಟಿಯಲ್ಲಿದ್ದರೆ ರೋಗಗಳು ತಾವಾಗಿಯೇ ಕಣ್ಮರೆಯಾಗುವವು. ಆದರೆ ಈಗಿನ ಸಂದರ್ಭದಲ್ಲಿ ಅತ್ಯಶನ, ಅತಿಪಾನಾದಿದೋಷ ಗಳು ಮಾನವನನ್ನು ದುರ್ಬಲನನ್ನಾಗಿಯೂ ಸ್ವಾರ್ಥಿಯನ್ನಾಗಿಯೂ ಮಾಡಿವೆ. ನಾಲಗೆಯ ರುಚಿಗೆ ದಾಸನಾಗಿ ಬೇಕುಬೇಕೆನಿಸಿದಾಗಲೆಲ್ಲ ಬಾಯಾಡಿಸುತ್ತಾ ರುಚಿ ರುಚಿಯಾದ ಪದಾರ್ಥಗಳನ್ನು ತಿನ್ನುತ್ತಿದ್ದರೆ ಯಾವ ಜಠರಾಗ್ನಿಹೋತ್ರವೂ ಆಗ ಲಾರದು. ಅಂಥ ಸಂದರ್ಭದಲ್ಲಿ ಪರಿಷೇಚನೆಯು ನಗೆಪಾಟಲಾಗುವದು. ನಮ್ಮಲ್ಲಿ ಕೆಲವರಾದರೂ ಈ ಸ್ವೇಚ್ಛಾಚಾರವನ್ನು ಬಿಟ್ಟು ಶಾಸ್ತ್ರನಿಯಮಗಳಿಗೆ ಬದ್ಧರಾಗಿ ನಡೆಯುತ್ತಾ ಜನತೆಗೆ ಆದರ್ಶವಾಗಿ ಏಕೆ ಇರಬಾರದು ? ಎಂದು ಆಲೋಚಿಸಬೇಕು. ಪ್ರತಿಯೊಬ್ಬನೂ ತನ್ನ ಅಗತ್ಯಕ್ಕಿಂತ ಹೆಚ್ಚಾಗಿ ತಿನ್ನುವದನ್ನು ನಿಲ್ಲಿಸಿದರೆ ಜಗತ್ತಿನ ಕೆಲವಾದರೂ ಜನರ ಹಸಿವನ್ನು ಹೋಗಲಾಡಿಸಬಹುದಾಗಿದೆ. ಅಲ್ಲದೆ ಮಾನವನು ಆಹಾರನಿಯಮ, ಶುದ್ಧಿಗಳನ್ನು ಚೆನ್ನಾಗಿ ಅನುಸರಿಸಿದಲ್ಲಿ ಅಂತಃಕರಣಶುದ್ಧಿಯೂ ಭಗವಂತನ ಚಿಂತನೆಗೆ ಸಹಾಯವೂ ದೊರಕುವದು. ರೋಗಗಳ ಬಾಧೆಯೂ ಸಾಕಷ್ಟು ಕಡಿಮೆಯಾಗುವದು. ಏಕಾದಶೀ, ವ್ರತದಿನಗಳು ಹಾಗೂ ಇತರ ಕುರಿತ ದಿನಗಳಲ್ಲಿ ಏಕಭುಕ್ತ ಅಥವಾ ನಿರಾಹಾರವನ್ನು ಆಚರಿಸಿದರೆ ಶರೀರವೂ ಚೊಕ್ಕಟ ವಾಗುವದು. 'ಲಂಘನಂ ಪರಮೌಷಧಮ್' ಎಂಬ ನುಡಿಯನ್ನು ನೀವು ಕೇಳಿರ ಬಹುದು. ಅಂತೂ ಶಾಸ್ತ್ರನಿಯಮಗಳನ್ನು ಕಂದಾಚಾರದ ಪದ್ಧತಿಗಳೆಂತ ತೆಗೆದು ಹಾಕುವ ಮೊದಲು ಅವುಗಳ ಅರ್ಥವೇನೆಂಬುದನ್ನು ತಿಳಿಯುವದು ಈಗಿನ ಕಾಲಕ್ಕೆ ಆವಶ್ಯವಾಗಿದೆ.

---

# ಶ್ರೀ ಶಂಕರಾಚಾರ್ಯರ ಅದ್ವೈತವೇದಾಂತ

(ಲೇಖಕರು : ಪ್ರೊ॥ ಅರ್ಥರ್ ಐಸೆನ್‌ಬರ್ಗ್ ; ಫೋರ್ಡ್ ಫೌಂಡೇಶನ್)

[ಕನ್ನಡಕ್ಕೆ ಅನುವಾದಕರು : ಶ್ರೀ॥ ಎ. ಎಸ್. ವೇಣುಗೋಪಾಲರಾವ್, ಎಂ.ಎ., ಬಿ.ಕಾಂ., ಕಮಲಾನೆಹರೂ ಕಾಲೇಜು ಕನ್ನಡವಿಭಾಗ ಮುಖ್ಯಸ್ಥರು ; ಶಿವಮೊಗ್ಗ]

(೧೯೩ನೆಯ ಪುಟದಿಂದ ಮುಂದುವರಿದದ್ದು)

ನಮ್ಮ ಮುದುಕನ ಚಿತ್ರದ ಪೂರ್ಣವಿಶ್ಲೇಷಣೆಯನ್ನು ನಾವಿನ್ನೂ ಮುಗಿಸಿಲ್ಲ. ಸೂಕ್ಷ್ಮದರ್ಶಕದಿಂದ ನೋಡಿದಾಗ ಈ ಚಿತ್ರ ಪೂರ್ಣವಾಗಿ ಮಾಯವೇ ಆಗಿಬಿಡುತ್ತದೆ. ಪ್ರಾಯಶಃ ಯಾವ ವಿರೋಧವೂ ಇರಲಾರದ ಒಂದು ಮಾತನ್ನು ನಾನಿಲ್ಲಿ ಹೇಳಬಹುದು : ಎಲೆಕ್ಟ್ರಾನ್-ಪ್ರೋಟಾನುಗಳ ಸ್ತರದಲ್ಲಿ ಈ ನಮ್ಮ ಚಿತ್ರಕ್ಕೆ ಅಸ್ತಿತ್ವವೇ ಇಲ್ಲ. ಅದರೆ ಈ ಚಿತ್ರದಲ್ಲಿಯೇ ಪೂರ್ಣಮಗ್ನನಾಗಿರುವ ವ್ಯಕ್ತಿಯ ದೃಷ್ಟಿಯಲ್ಲಿ ಎಲೆಕ್ಟ್ರಾನ್-ಪ್ರೋಟಾನುಗಳಿಗೆ ಬೆಲೆಯೇ ಇಲ್ಲ; ಏಕೆಂದರೆ ಆ ಸ್ತರದಲ್ಲಿ ಅವುಗಳ ಚಿಂತನವೇ ಅರ್ಥಹೀನ. ಜೀವನದ ಜಂಜಡದಲ್ಲಿ ತೊಡಗಿಕೊಂಡ ಕೆಲವೇ ಮಂದಿಗೆ ಈ ಪ್ರಪಂಚವು ಬರಿಯ ಮಾಯೆ, ಪೂರ್ಣಸತ್ಯವಂತೂ ಅಲ್ಲ; ಸಾಪೇಕ್ಷ ಸತ್ಯ ಮಾತ್ರ ಎಂಬ ಚಿಂತನೆ ಹೊಳೆದೀತು. ಇಷ್ಟು ಆಕರ್ಷಕವಾಗಿ, ಸುಖದಾಯಕವಾಗಿ ತೋರುವ ಜಗತ್ತನ್ನು ಯಾವದೋ ಗೂಢಸತ್ಯದ ಸಾಕ್ಷಾತ್ಕಾರಕ್ಕಾಗಿ ಹರಿದು ಚೂರುಚೂರು ಮಾಡುವದು ತುಂಬ ಕಷ್ಟದ ಕೆಲಸವೇ. ಆಚಾರ್ಯ ಶಂಕರರು ಮಾಡಿದುದು ಈ ಅದ್ಭುತಸಾಹಸವನ್ನೇ. ಇದೇ ಅವರ ಶಾಶ್ವತಮಹಿಮೆಯಾಗಿದೆ. ಈ ವರ್ಣಚಿತ್ರದ ನಿದರ್ಶನದಿಂದ ಕಲಿಯುವ ಮತ್ತೊಂದು ಪಾಠವನ್ನು ಸೂಚಿಸಿ, ಈ ವಿವರಣೆಯನ್ನು ಮುಗಿಸೋಣ. ವರ್ಣಚಿತ್ರದ ಸ್ತರ, ವರ್ಣದ ಸ್ತರಕ್ಕಿಂತ ಸಾಪೇಕ್ಷವಾಗಿ ಹೆಚ್ಚು ಸತ್ಯವಲ್ಲ ಎಂಬ ಕಾರಣದಿಂದ ಚಿತ್ರವೇ ಬೆಲೆಯಿಲ್ಲದ್ದು ಎಂದು ಹೇಳುವದು ಶುದ್ಧ ಅವಿವೇಕ. ಅದೂ ಖಂಡಿತ ಸತ್ಯವಸ್ತುವೇ. ಆದರೆ ಅದಕ್ಕಿಂತ ಮೇಲುಮೇಲಿನ ಸತ್ಯದ ಸ್ತರಗಳನ್ನು ಮುಟ್ಟುತ್ತಹೋದಾಗ ಮಾತ್ರ ಈ ವರ್ಣಚಿತ್ರ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತದೆ.

ಹಾಗೆಯೇ ನಾವು ವಾಸಿಸುವ ಈ ಪ್ರಪಂಚವೂ ಸಾಕಷ್ಟು ಸತ್ಯವೇ ಆಗಿದೆ. ಆದರೆ, ಅದ್ವೈತವೇದಾಂತವನ್ನು ನಾವು ಒಪ್ಪುವದಾದರೆ, ಸತ್ಯ ಸಾಕ್ಷಾತ್ಕಾರದ ಮೇಲುಮೇಲಿನ ಸ್ತರಗಳನ್ನು ನಾವು ಮುಟ್ಟುತ್ತಾಹೋದಂತೆ ಈ ಪ್ರಪಂಚವೂ ಕಡಿಮೆ ಸತ್ಯ ಎನಿಸುತ್ತಾಹೋಗುತ್ತದೆ. ನಾವು ಅಂತಿಮಸತ್ಯವಾದ ನಿರ್ಗುಣ ಬ್ರಹ್ಮವಸ್ತುವನ್ನು ಮುಟ್ಟಿದಾಗ ಮಾತ್ರ ಪ್ರಪಂಚವು ಪೂರ್ಣವಾಗಿ ಮಿಥ್ಯೆ ಎನಿಸುತ್ತದೆ. ಇಟಲಿದೇಶದ ಒಬ್ಬ ವಿಜ್ಞಾನಿಯ ಮಾತನ್ನು ಇಲ್ಲಿ ನಾವು ಸ್ಮರಿಸಿಕೊಳ್ಳಬಹುದು : "ಯಾವದೇ ಅಸಾಧಾರಣ ಸಂಗತಿಯನ್ನು ನಾವು ನಿರ್ಧರಿಸುವದು ಅದನ್ನು ತೂಗುವ ಮಾನದಂಡದಿಂದ ಮಾತ್ರ". ಸತ್ಯ ಸಾಕ್ಷಾತ್ಕಾರದ

ವಿವಿಧಸ್ತರಗಳನ್ನು ನಿರ್ಧರಿಸಿ ನೋಡುವ ಮಾಯೆಯ ಬಗ್ಗೆ ಸಾಕಷ್ಟು ದೀರ್ಘವಾಗಿ ಚರ್ಚಿಸಲಾಗಿದೆ. ಅದ್ವೈತದ ಮತ್ತೊಂದು ಮುಖ್ಯತತ್ವವಾದ 'ಅವಿದ್ಯೆ'ಯನ್ನು ಈಗ ವಿಶ್ಲೇಷಿಸಬಹುದು.

ಎಲ್ಲರೂ ಬಲ್ಲಂತೆ ಅವಿದ್ಯೆಯೆಂದರೆ ಅಜ್ಞಾನ. ಆದರೆ ಯಾವ ಬಗೆಯ ಅಜ್ಞಾನ? ವ್ಯಾವಹಾರಿಕವಾಗಿ ನೋಡಿದರೆ ಅವಿದ್ಯೆ ಎಂಬುದು ಬೌದ್ಧಿಕಅಜ್ಞಾನವಲ್ಲ. ಅದು ಮಾಯೆಯ ಸಹಚರಿಯೇ ಸರಿ, ಸೃಜನಾತ್ಮಕಶಕ್ತಿಯುಳ್ಳ ಅಜ್ಞಾನ ಅದು. ಶಂಕರರು ಹೇಳುವದೆಂದರೆ ಬ್ರಹ್ಮವೊಂದೇ ಅಂತಿಮ ಸತ್ಯ. ಅದು ಕಲ್ಪಿತ ಪ್ರಪಂಚ ದೃಷ್ಟಿಯಿಂದ ಸಗುಣವೂ ಮೂರ್ತಸ್ವರೂಪವೂ ಹೌದು. ಎಲ್ಲ ಚಟುವಟಿಕೆಗಳ ಕಾರಣವೂ ಹೌದು. ಇದರಿಂದ ಒಂದು ಪ್ರಶ್ನೆ ಏಳುತ್ತದೆ. ಅದಕ್ಕೆ ನಿಶ್ಚಿತ ಉತ್ತರ ಇರಲಾರದು; ಊಹೆಯು ತರ್ಕ ಮಾತ್ರ ಸಾಧ್ಯವಾದೀತು. ಪ್ರಶ್ನೆಯಿದು: ಈ ಬ್ರಹ್ಮಸೃಷ್ಟಿಯಾದರೂ ಏತಕ್ಕಾಗಿ? ಅದರ ಉದ್ದೇಶವೇನು? ಈ ಅಂತಿಮ ಒಗಟನ್ನು ಶಂಕರರು ಹೇಗೆ ಬಿಡಿಸುತ್ತಾರೆ, ಅದನ್ನು ಉತ್ತರಿಸುತ್ತಾರೆ- ಎಂದು ನೋಡೋಣ. ಅವರೆನ್ನುತ್ತಾರೆ: 'ದಿನದಿನದ ಬದುಕಿನಲ್ಲಿ ನಾವು ನೋಡುತ್ತಲೇ ಇದ್ದೇವೆ. ತಮ್ಮ ಎಲ್ಲ ಭೋಗಲಾಲಸೆಯನ್ನೂ ತೃಪ್ತಿಪಡಿಸಿಕೊಂಡ, ಅರಕೆ ಯಾವದೂ ಇಲ್ಲದ, ರಾಜರು-ಮಹಾರಾಜರು- ಶ್ರೀಮಂತರು ಕೂಡ ಬರಿಯ ವಿನೋದಕ್ಕಾಗಿ ಸುಖವನ್ನು ಹುಡುಕುತ್ತಲೇ ಹೊರಡುತ್ತಾರೆ. ಇತರ ಬಾಹ್ಯವಿಷಯಗಳ ಕರೆ ಅವರಿಗೆ ಕೇಳುವದೇ ಇಲ್ಲ. ಹಾಗೆಯೇ ಮಾನವನ ಬದುಕಿನಲ್ಲಿ, ತನ್ನದೇ ನಿಯಮಗಳಿಗನುಸಾರವಾಗಿ ಉಚ್ಛ್ವಾಸನಿಃಶ್ವಾಸಗಳು ನಡೆಯುತ್ತಲೇ ಇರುವದನ್ನು ನಾವು ನೋಡುತ್ತಿದ್ದೇವೆ. ಭಗವಂತನ ಸೃಷ್ಟಿ ಇಂಥ ಒಂದು ಲೀಲಾವಿನೋದವೇ, ಅದು ನಿರುದ್ದಿಷ್ಟ; ಅದರ ಸ್ವಭಾವವೇ ಇಂತಹ ವಿನೋದ. ಯಾವ ತರ್ಕ-ಶಾಸ್ತ್ರ-ಪ್ರಮಾಣಗಳಿಂದಲೂ ಈ ಭಗವದ್ವಿಲಾಸಕ್ಕೆ ಕಾರಣವನ್ನು ಸಮರ್ಥಿಸಲಾಗುವದಿಲ್ಲ. ಆತನ ಸ್ವಭಾವ-ಸಂಕಲ್ಪಗಳನ್ನು ಪ್ರಶ್ನಿಸಲೂ ಸಾಧ್ಯವಿಲ್ಲ. ಪ್ರಪಂಚದ ಸೃಷ್ಟಿ ಅತಿ ಸಂಕೀರ್ಣ-ಶ್ರಮದಾಯಕ ಎಂದು ನಮಗೆ ಎನ್ನಿಸಿದರೂ, ಅಪರಿಮಿತ ಶಕ್ತಿಯ ಸ್ವರೂಪನಾದ ಸೃಷ್ಟಿಕರ್ತನಿಗೆ ಅದು ಕೇವಲ ಲೀಲೆ."

ನಿಮ್ಮಲ್ಲಿ ಅನೇಕರು ತಿಳಿದಿರುವಂತೆ ಇದು ಬ್ರಹ್ಮಸೂತ್ರ-ಶಾಂಕರಭಾಷ್ಯದಿಂದ ಉದ್ಧೃತವಾದದ್ದು. (ಎರಡನೆಯ ಅಧ್ಯಾಯ ಪ್ರಥಮಪಾದ-ಸೂತ್ರ. 33)

"....ಆದರೆ ಬ್ರಹ್ಮಸೃಷ್ಟಿ ಕೇವಲ ಲೀಲೆಗಾಗಿ....ನಾವು ನಿತ್ಯದ ಬದುಕಿನಲ್ಲಿ ನೋಡುವಂತೆ, "ಲೋಕವತ್ತು ಲೀಲಾಕೈವಲ್ಯಮ್" ಅವಿದ್ಯೆಗೂ ಈ ವ್ಯಾಖ್ಯಾನಕ್ಕೂ ಏನು ಸಂಬಂಧ? ಉತ್ತರ ಹೀಗಿರಬಹುದು: ಬ್ರಹ್ಮವೊಂದೇ ಸತ್ಯ ಎಂಬುದು ನಿಜವಾದರೆ, ಈ ಸಮಸ್ತ ಸೃಷ್ಟಿಯೂ ಅದರಿಂದಲೇ ಹೊಮ್ಮಿರಬೇಕು. ಆದರೆ ಸಂಪೂರ್ಣವಾಗಿ ತನ್ನಿಂದಲೇ ಹೊರಹೊಮ್ಮಿದ, ತನಗೆಮಾತ್ರ ಸಂಬಂಧಿಸಿದ ಸೃಷ್ಟಿಯಲ್ಲಿ ಲೀಲೆ ಏನು ಬಂತು? ವೇದಾಂತಸೂತ್ರಗಳಾಗಲೀ ಆಚಾರ್ಯ ಶಂಕರರಾಗಲೀ, ಬ್ರಹ್ಮ

ಸೃಷ್ಟಿಯನ್ನು ಕುರಿತ ಈ ಅತಿ ತೊಡಕಾದ ಪ್ರಶ್ನೆಗೆ ಸಾಮಾನ್ಯ ಬದುಕಿನ ದೃಷ್ಟಾಂತ ವೊಂದನ್ನು ಕೊಡಲು ಹಿಂಜರಿಯದಿರುವದರಿಂದ, ಅವರ ಮಾರ್ಗವನ್ನೇ ನಾವೂ ಅನುಸರಿಸೋಣ !

ಒಂದು ನಾಟಕವನ್ನು ನೋಡಲು ನಾಟ್ಯಮಂದಿರಕ್ಕೆ ಹೋಗುತ್ತೇವೆ-ಎನ್ನೋಣ. ನಾವು ನೋಡುತ್ತಿರುವದು ಬರಿಯ ಅಭಿನಯ-ನೈಜಘಟನೆಯಲ್ಲ ಎಂಬ ಭಾವ ನಮ್ಮಲ್ಲಿ ಜಾಗೃತವಾಗಿರುವವರೆಗೂ ನಾಟಕದ ನಿಜವಾದ ಆನಂದ ನಮಗೆ ದೊರೆಯುವದಿಲ್ಲ. ಅದು 'ಲೀಲೆ' ಎನಿಸುವದೂ ಇಲ್ಲ. ನಾವು ನೋಡು ತ್ತಿರುವದು ಸತ್ಯಘಟನೆಯಲ್ಲ ಎಂಬ ಸಂಗತಿಯನ್ನು ಹೇಗಾದರೂ ಮಾಡಿ, ತತ್ಕಾಲ ಕ್ಕಾದರೂ ನಾವು ಮರೆಯಲೇಬೇಕು. ಈ ನಾಟಕಕ್ಕೊಂದು ಕೊನೆಯಿದೆ ; ಇದರ ನಾಯಕಿ, ಸಂಕಟಕ್ಕೊಳಗಾದ ಮಹಾರಾಣಿ ಖಂಡಿತ ಅಲ್ಲ ; ಆಕೆ ಕೇವಲ ನಟಿ ; ಇಂತಹ ಸತ್ಯಸಂಗತಿಗಳನ್ನು ನಾವು ಮರೆಯಲೇಬೇಕು. ಹಾಗಲ್ಲದೆ ನಾಟಕ ನೋಡುವ ಪ್ರತಿಕ್ಷಣದಲ್ಲೂ 'ಓ, ಇದೆಲ್ಲ ಬರಿಯ ನಟನೆ' ಎಂದು ಯೋಚಿಸುತ್ತಲೇ ಇದ್ದರೆ ನಾಟಕದ ನಿಜವಾದ ಆನಂದವನ್ನು ಖಂಡಿತ ನಾವು ಅನುಭವಿಸಲಾರೆವು.

ನಮ್ಮ ಕನಸುಗಳನ್ನೇ ಕುರಿತು ಯೋಚಿಸಿ. ಅವುಗಳಲ್ಲಿನ ಚಿತ್ರವಿಚಿತ್ರ ಘಟನೆ ಗಳಲ್ಲಿ ನಾವು ಭಾಗವಹಿಸುತ್ತೇವೆ- ಅವುಗಳಲ್ಲಿ ಕೆಲವು ತುಂಬ ರಂಜಕ, ಕೆಲವು ಭಯಾನಕ, ಆದರೆ ಎಲ್ಲವೂ ತುಂಬ ಸ್ವಾರಸ್ಯಕರ. ಈ ಸ್ವಪ್ನನಾಟಕದ ಸಂಯೋ ಜಕರು, ನಟರು, ಸೂತ್ರಧಾರರು ಎಲ್ಲವೂ ನಾವೇ, ಸ್ವಪ್ನವೂ ನಮ್ಮದೇ, ಎಂಬುದು ಸಾಮಾನ್ಯವಾಗಿ ನಮಗೆ ತಿಳಿದಿರುವದೇ ಇಲ್ಲ. ಇವೆಲ್ಲ ನಮಗೆ ತಿಳಿದುಬಿಟ್ಟರೆ ನಾವು ಆ ಕನಸನ್ನು, ಅದರ ಲೀಲಾವಿನೋದವನ್ನು ಸವಿಯಲು ಸಾಧ್ಯವಾಗುವದೇ ಇಲ್ಲ. ಎಂದರೆ ಮುಖ್ಯವಾದ ಸಂಗತಿಯಿದು : ಅವಿದ್ಯೆಯಿಲ್ಲ ಎಂದರೆ ಲೀಲಾ ವಿನೋದದ ಅನುಭವವೂ ಇಲ್ಲ ! ಅರಿವು ಎಂದರೆ ವಿದ್ಯೆಯನ್ನು ಪಡೆಯುವದು ; ಹಾಗೆಂದರೆ ನಮ್ಮ ಕನಸು ಒಡೆದಂತೆಯೇ, ನಾಟಕ ಕೊನೆಯಾದಂತೆಯೇ. ಆದುದ ರಿಂದಲೇ ಈ 'ಅವಿದ್ಯೆ' ನಮಗೆ ಪ್ರಪಂಚದ ಸಂತೋಷವನ್ನು ಒದಗಿಸುವ ಸಾಧನ.

ಮತ್ತೊಮ್ಮೆ ಶಂಕರರ ಮಾತುಗಳನ್ನೇ ಉದಾಹರಿಸುತ್ತೇನೆ. ಈ ವಿಷಯ ದಲ್ಲೂ, ಯಾವಾಗಲೂ ಇರುವಂತೆ ಅವರ ಮಾತು ತುಂಬ ಖಚಿತ, ಅಸಂದಿಗ್ಧ. "ಮಣ್ಣು ಮಡಕೆಗೆ ಕಾರಣ ; ಹಾಗೆಯೇ ವೇದಾಂತವು ಹೇಳುವ ಅವಿದ್ಯೆಯೇ ಈ ಪ್ರಪಂಚಕ್ಕೆ ನಿಮಿತ್ತಕಾರಣ. ಅವಿದ್ಯೆ ನಾಶವಾದಾಗ ಪ್ರಪಂಚ ಎನ್ನುವದು ಎಲ್ಲಿದೆ ?....ಅಂತಿಮಸತ್ಯದ ಸಾಕ್ಷಾತ್ಕಾರವಾದಾಗ ಈ ಪ್ರಪಂಚವು ಲಯವಾಗಿಬಿಡು ತ್ತದೆ. ಈ ಮಾತಿಗೆ ಅಸಮ್ಮತಿಯನ್ನು ತೋರಿಸುವವರ ಚಾಪಲ್ಯವನ್ನು ಕೊಂಚವೂ ನಾನು ತಡೆಯಲಾರೆ !

ಮಾನವನ ಮನಸ್ಸು ಈವರೆಗೆ ಸೃಷ್ಟಿಸಿರುವ ಅಪೂರ್ವವೂ ಅತ್ಯಂತ ಕಲಾತ್ಮಕ ವೂ ಆದ ಪ್ರತಿಮೆಗಳಲ್ಲಿ ನರ್ತನಭಂಗಿಯಲ್ಲಿ ನಿಂತಿರುವ ನಟರಾಜ ಶಿವನ ಪ್ರತಿಮೆ

ಯೂ ಒಂದು ಎಂದು ನನ್ನ ಭಾವನೆ. ಆಚಾರ್ಯ ಶಂಕರರ ಪ್ರಪಂಚದ ಕಲ್ಪನೆಯನ್ನು ಅದು ಸಮರ್ಥವಾಗಿ ಪ್ರತಿಪಾದಿಸುತ್ತದೆ ಎಂದು ನನ್ನ ಅನಿಸಿಕೆ. ಸಮಸ್ತ ಬ್ರಹ್ಮಾಂಡವೇ ಶಿವನಿಂದ ವಿಕಾಸಗೊಂಡುದು ಎಂಬುದನ್ನೂ ಅದು ಅವನ ಲೀಲಾವಿನೋದವೆಂಬುದನ್ನೂ ಈ ಪ್ರತಿಮೆಯಲ್ಲಿ ನಾವು ಕಾಣುತ್ತೇವೆ. ಈ ನಟರಾಜ ಮೂರ್ತಿಯ ಹಲವು ಸಂಕೇತಗಳನ್ನು ಈಗಾಗಲೇ ಚೆನ್ನಾಗಿ ವಿವರಿಸಲಾಗಿದೆ; ಅವು ಎಲ್ಲರೂ ತಿಳಿವದ್ದೇ. ಶಿವನ ಡಮರುಗದ ನಾದದ ತರಂಗಗಳಿಂದ ಹೇಗೆ ಈ ಜಗತ್ತು ಹೊರಹೊಮ್ಮಿತು ಎನ್ನುವದು; ಶಿವನ ಕೈಯಿಂದ ಕ್ಷಣಿಕವಾಗಿ ಲಯ ಹೊಂದುವ ಜಗತ್ತು, ಶಿವನ ಅಭಯಮುದ್ರೆ, ಅವನ ಪವಿತ್ರ ಪಾದ, ಈ ಎಲ್ಲ ಸಂಕೇತಗಳನ್ನೂ ಅವುಗಳ ಸ್ವಾರಸ್ಯವನ್ನೂ ನಾನು ಬಹು ಹಿಂದೆಯೇ ಓದಿ ತಿಳಿದೆನು. ಆದರೆ ಮುಂದೆ ಆರು ವರ್ಷಗಳ ಅವಧಿಯಲ್ಲಿ ಈ ಕಲ್ಪನೆಯನ್ನು ಕುರಿತು ಮತ್ತೆಮತ್ತೆ ಚಿಂತಿಸಿದಾಗಲೇ ಅದರಲ್ಲಿ ಅಡಗಿದ ಮತ್ತೊಂದು ಸಂಕೇತ ನನಗೆ ಧಿಗ್ಗನೆ ಹೊಳೆಯಿತು.

ನಾವೆಲ್ಲ ತಿಳಿದಂತೆ ನಟರಾಜನ ಅನೇಕ ವಿಗ್ರಹಗಳು, ಒಂದು ಕುಬ್ಜ ವ್ಯಕ್ತಿಯ ಬೆನ್ನಮೇಲೆ ಶಿವನು ನರ್ತಿಸುತ್ತಿರುವಂತೆ ರೂಪಿತವಾಗಿವೆ. ಈ ಕುಬ್ಜ ನಮ್ಮ ಹಳೆಯ ಮಿತ್ರ, ಅವಿದ್ಯೆಯೇ ಸರಿ! ಅವನಿಗೆ ಅಜ್ಞಾನ, ಪಾಶ, ಕತ್ತಲು, ದುಷ್ಟಶಕ್ತಿ ಮುಂತಾದ ಇತರ ಹೆಸರುಗಳಿರುವದು ನಿಜ. ಆದರೆ ನಾನು ಆತನನ್ನು 'ಅವಿದ್ಯೆ' ಎಂದೇ ಚಿಂತಿಸಲು ಬಯಸುತ್ತೇನೆ. ಅವಿದ್ಯೆಯನ್ನು ತುಳಿದು ನಾಶಮಾಡುತ್ತಿರುವ ಶಿವ! ಈ ಚಿಂತನೆ ನನಗೆ ಬಹುವಾಗಿ ಹಿಡಿಸಿತು. ಶಿವನು ಅವಿದ್ಯೆಯನ್ನು ತುಳಿದು ನಾಶಮಾಡುತ್ತಿರುವದು ನಿಜವಾದರೆ, ಆ ಅವಿದ್ಯೆಯೇ ಶಿವನ ಪಾದಸ್ಪರ್ಶಕ್ಕೆ ಆಧಾರವಾಗಿದೆ ಎಂಬುದೂ ಅಷ್ಟೇ ನಿಜ. ನಟರಾಜನ ವಿಗ್ರಹವನ್ನು ಮತ್ತೊಮ್ಮೆ ನೋಡಿ. ಅವಿದ್ಯೆಯ ಕುಬ್ಜನನ್ನು ತೆಗೆದುಬಿಡಿ! ಶಿವನು ನಿಲ್ಲುವದಾದರೂ ಯಾವದರಮೇಲೆ? ಶೂನ್ಯ, ಬರಿಯ ಶೂನ್ಯ! ಅಲ್ಲವೆ? ಮತ್ತೆ ನಾವು ಸ್ಪಷ್ಟವಾಗಿ ತಿಳಿಯುತ್ತೇವೆ, ಶಂಕರರು ಎಷ್ಟು ಸಮರ್ಥವಾಗಿ ಈ ತತ್ವವನ್ನು ಪ್ರತಿಪಾದಿಸಿದ್ದಾರೆ!- 'ಅಂತಿಮ ಸತ್ಯದ ಸಾಕ್ಷಾತ್ಕಾರವಾದರೆ ಪ್ರಪಂಚವು ತನಗೆತಾನೇ ಕಣ್ಮರೆಯಾಗುತ್ತದೆ.'

ಅವಿದ್ಯೆಯನ್ನು ನಾಶಗೊಳಿಸಲು ನೆರವಾಗುವದು ಶಿವನ ಹಣೆಯಬರಹ! ಹಾಗೆ ಮಾಡುವದರಲ್ಲಿ ಅವನ ಸೃಷ್ಟಿಯೇ ನಾಶವಾಗುವದು ನಿಜ. ಶಂಕರರು ಹೇಳುವಂತೆ "ಅವಿದ್ಯೆಯನ್ನು ನಾಶಮಾಡಿ; ಜಗತ್ತನ್ನೇ ನೀವು ಕೊನೆಗೊಳಿಸುತ್ತೀರಿ"- ಶಿವನನ್ನೂ ಸೇರಿದಂತೆ. ಕಡೆಗೆ ಉಳಿಯುವದು ನಿರ್ಗುಣ, ನಿರಾಕಾರ, ಬ್ರಹ್ಮವೊಂದೇ. ಈ ಗಂಭೀರ-ಭೀಷಣವಾದ ಆಲೋಚನೆಯ ಅರಮನೆಯಲ್ಲಿ ನನಗೇನೂ ಹೆಚ್ಚು ಸಮಾಧಾನ ತೋರುತ್ತಿಲ್ಲ. ಅತ್ಯಂತ ನಿಸ್ಪೃಹನೂ ಪ್ರಾಮಾಣಿಕನೂ ಆದ ಪೂರ್ಣಜ್ಞಾನಿಯೊಬ್ಬನು ಈ ಅಂತಿಮಸತ್ಯವನ್ನು ಸಿದ್ಧಪಡಿಸಿ ನನಗೆ ತೋರಿಸಬೇಕಾಗಿದೆ. ಆಗಲೆ ಈ ಆಲೋಚನೆ ಅಷ್ಟು ಧೃಢವಾಗಿದ್ದರೆ-ನಾನಂತೂ ಅದು ಹಾಗಿದೆ ಎಂದು ತಿಳಿದಿದ್ದೇನೆ, ಅದು ಅತ್ಯಂತ ಬೆಲೆಯುಳ್ಳದ್ದು ಹಾಗೂ ಪೂರ್ಣವಾಗಿ ಆತ್ಮಸಾಂಗತ್ಯವುಳ್ಳ ಯೋಚನೆ. (ಅದರಲ್ಲಿ ದ್ವಂದ್ವವಿಲ್ಲ). ಒಳಗೊಂದಲ ಹಾಗೂ

ವಿರೋಧಾಭಾಸಗಳಿಂದ ದೂರವಾದ, ಇದಕ್ಕಿಂತ ಖಚಿತವಾದ ತಾತ್ವಿಕಸಿದ್ಧಾಂತ ಬೇರೆ ಯಾವದೂ ನನಗೆ ತೋರುವದಿಲ್ಲ. ಶಂಕರರು ಇಷ್ಟು ದೋಷದೂರ ಹಾಗೂ ಖಚಿತವಾದ ಸಿದ್ಧಾಂತದ ಶಿಲ್ಪಿಯಾಗಿರುವದು ನಿಜಕ್ಕೂ ಒಂದು ಅದ್ಭುತ ಸಾಧನೆ. ಅದು ನಮ್ಮಂತಹ ಅಲ್ಪಮತಿಗಳನ್ನು ಬೆರಗುಗೊಳಿಸಿ ಮೂಕರನ್ನಾಗಿಸುತ್ತದೆ.

ಈ ವಿಶ್ವದ ಮುಖ್ಯಗುರಿಯೆಂದರೆ ದುಷ್ಟಶಕ್ತಿಗಳ ಪರಾಭವ ಹಾಗೂ ದೈವೀ ಶಕ್ತಿಯ ವಿಜಯ ಎಂದು ಭರವಸೆ ನೀಡುವ ಇತರ ಅನೇಕ ತಾತ್ವಿಕ-ಧಾರ್ಮಿಕ ಸಿದ್ಧಾಂತಗಳಿಂದ ನಮಗೆ ತುಂಬ ತೃಪ್ತಿ-ಸಮಾಧಾನ ದೊರೆಯಬಹುದು. ಆದರೆ ಸೃಷ್ಟಿಯ ಮೂಲ ಉದ್ದೇಶ, ನೈತಿಕಶಕ್ತಿಗಳ ವಿಜೃಂಭಣೆಯೇ ಎಂಬ ಸಿದ್ಧಾಂತವನ್ನು ಸ್ವೀಕರಿಸುವದು ನನ್ನಂತಹವನ ಅನುಭವಕ್ಕೆ ತೀರ ವಿರುದ್ಧವಾದ, ಆದುದರಿಂದಲೇ ನಾನು ನಂಬಲು ಅಸಾಧ್ಯವಾದ ಸಂಗತಿ. ಇದನ್ನು ನೇರವಾಗಿ ಒಪ್ಪಿಕೊಂಡುಬಿಡುತ್ತೇನೆ. ಶ್ರೀ ಶಂಕರರು ಈ ನೈತಿಕಮೌಲ್ಯಗಳ, ಒಳಿತು-ಕೆಡುಕಗಳ ಜವಾಬ್ದಾರಿಯನ್ನು ಸೃಷ್ಟಿತತ್ತ್ವದಿಂದ ಹೊರಗಿಟ್ಟು, ಅದನ್ನು ಮಾನವನಮೇಲೆಯೇ ಹೊಂಸುವದು, ಉಚಿತವೇ ಹೊರತು, ದೋಷವಲ್ಲ. ಮನುಷ್ಯನ ಪಾಪ-ಪುಣ್ಯಗಳ ಹೊರೆಯನ್ನು ಯಾವದೇ ನಿರ್ದಿಷ್ಟದೈವಕ್ಕೆ ಒಪ್ಪಿಸುವದಕ್ಕೆ ಬೇಕಾದ ಯಾವ ಆಧಾರವೂ ಶಂಕರಸಿದ್ಧಾಂತದಲ್ಲಿ ನಿಮಗೆ ದೊರೆಯುವದಿಲ್ಲ. ಮರ್ತ್ಯಜಗತ್ತಿನಲ್ಲಿ ಹೆಣ್ಣು-ಗಂಡುಗಳಷ್ಟೇ ನೀತಿಸಂಹಿತೆಯೂ ಅವಶ್ಯಕ. ಈ ಜವಾಬ್ದಾರಿಯನ್ನು ನಾವು-ನೀವು ಭರಿಸಬೇಕು. ನಾವು ಜಗತ್ತಿನಲ್ಲಿ ಹರಡುವ ಕೆಡಕುಗಳಿಗೆ ಯಾವ ಶಾಶ್ವತ ಬ್ರಹ್ಮವನ್ನೂ ಹೊಣೆಯಾಗಿಸಲಾರೆವು; ಹಾಗೆ ಮಾಡಿ ಪಲಾಯನ ಸೂತ್ರ ಪಠಿಸಲಾರೆವು. ಇದು ತುಂಬ ಕಠಿಣಶಿಕ್ಷೆಯೇ ಸರಿ; ಆದರೆ ಅದರಿಂದ ನಮ್ಮ ಬದುಕಿಗೆ ಬೆಲೆ ಬರುತ್ತದೆ; ನಾವೇನೂ ಬೇರೆ ಯಾವ ಸೂತ್ರದ ಬೊಂಬೆಗಳಲ್ಲ!

ಈ ಹಾದಿಯಲ್ಲಿನ ಪ್ರಗತಿ ತುಂಬ ನಿಧಾನ ಎಂಬುದೇ ಒಂದು ವ್ಯಥೆ. ಆದರೆ ಆ ಜರ್ಮನ್ ಕವಿ ರ್ಯೂಕೆರ್ಟ್‌ನ (Rueckert) ಮಾತುಗಳನ್ನು ಒಪ್ಪದಿರಲು ಸಾಧ್ಯವೆ? "ಹಾರಲಾರದ ಎಡೆಯಲ್ಲಿ ತೆವಳಲೇ ಬೇಕು; ಶಾಸ್ತ್ರ ಸಾರುತಿದೆ....ತೆವಳುವದು ಪಾಪವಲ್ಲ." ಕಡೆಯಲ್ಲಿ ಒಂದು ಟಿಪ್ಪಣಿ: ವಿಶ್ವದ ಅನೇಕ ಖ್ಯಾತ ಭೌತವಿಜ್ಞಾನಿಗಳು ವೇದಾಂತದಕಡೆಗೆ ಆಕರ್ಷಿತರಾಗಿರುವದು ಕೇವಲ ಆಕಸ್ಮಿಕವಲ್ಲ. ಅದಕ್ಕೆ ಕಾರಣ ಹುಡುಕುವದು ತೀರ ಸುಲಭ. ಆಧುನಿಕ ಭೌತವಿಜ್ಞಾನದ ಅನೇಕ ಸಂಶೋಧನೆಗಳನ್ನು ಸ್ವಲ್ಪವೂ ಮುಕ್ಕಾಗದಂತೆ ತನ್ನ ಕಕ್ಷೆಯಲ್ಲಿ ತರುವ ಸಾಧ್ಯತೆಯನ್ನು ಅದ್ವೈತಸಿದ್ಧಾಂತವೊಂದೇ ಒದಗಿಸಬಲ್ಲದು. ಜಡ ಹಾಗೂ ಚೈತನ್ಯವು ಬೇರೆಬೇರೆ ಎಂದು ಎಲ್ಲಿಯವರೆಗೆ ವಿಜ್ಞಾನಿಗಳು ನಂಬಿದ್ದರೋ ಅಲ್ಲಿಯವರೆಗೆ ಅದ್ವೈತಸಿದ್ಧಾಂತ ತುಂಬ ಅನಾಕರ್ಷಕವಾಗಿತ್ತು. ಆದರೆ ಈಗ ಜಡ-ಚೈತನ್ಯಗಳು ಬೇರೆ ಯಾವದೋ ಶಕ್ತಿಮೂಲದ ಸಮಾನ ಅಂಶಗಳೆಂದು ಸಿದ್ಧವಾದ ಮೇಲೆ ಅದ್ವೈತದ ಪ್ರಭಾವ ಗಾಢವಾಗಿದೆ-ಅಪ್ರತಿಹತವಾಗಿದೆ.

ಇಲ್ಲಿಯವರೆಗೂ ವಿರುದ್ಧ ದಿಕ್ಕಿನಲ್ಲೇ ಕ್ರಮಿಸುತ್ತಿದ್ದ ಪೌರ್ವಾತ್ಯ ಹಾಗೂ ಪಾಶ್ಚಾತ್ಯತತ್ತ್ವಚಿಂತನಗಳು ಈ ಶತಮಾನದಲ್ಲಿ ಪರಸ್ಪರ ಹತ್ತಿರವಾಗುತ್ತ ಬಂದು ಮೊದಲಬಾರಿಗೆ ಸಮಾನಸಿದ್ಧಾಂತಗಳನ್ನು ಒಪ್ಪುತ್ತಿರುವದು ತುಂಬ ಸ್ವಾರಸ್ಯದ ಸಂಗತಿ. ಪೌರ್ವಾತ್ಯ ಪ್ರಪಂಚ ಹೀಗೆ ಸಾರುತ್ತಿದ್ದ ದಿನಗಳೂ ಇದ್ದವು : ನಮ್ಮ ಬಾಹ್ಯಪ್ರಪಂಚ ಕೇವಲ ಮಾಯೆ, ಕೇವಲ ತರ್ಕ, ಬೌದ್ಧಿಕಚರ್ಚೆಗಳಿಂದ ಅಂತಿಮ ಸತ್ಯವನ್ನು ತಿಳಿಯಲಾಗುವದಿಲ್ಲ. ಧ್ಯಾನ-ಆತ್ಮಚಿಂತನಗಳೇ ಅದಕ್ಕೆ ಏಕೈಕ ಸಾಧನ. ಪಾಶ್ಚಾತ್ಯದೇಶಗಳಾದರೋ ಗೆಲಿಲಿಯೋ ಕಾಲದಿಂದ ಹೀಗೆ ಸಾರಿದವು : ಪ್ರಾಯೋಗಿಕವಿಜ್ಞಾನದಿಂದ ಮಾತ್ರ ಸತ್ಯದ ಸಾಕ್ಷಾತ್ಕಾರ ಸಾಧ್ಯ. ಇತರ ಎಲ್ಲ ಮಾರ್ಗಗಳೂ ವಿಶ್ವಾಸಕ್ಕೆ ಅನರ್ಹವಾದವು. ಅವು ಕೇವಲ ವ್ಯಕ್ತಿನಿಷ್ಠ, ಅವುಗಳಿಗೆ ವೈಜ್ಞಾನಿಕಮೌಲ್ಯವೇನೂ ಇಲ್ಲ. ಹತ್ತೊಂಬತ್ತನೆಯ ಶತಮಾನದ ಉದ್ದಕ್ಕೂ, ವಿಶ್ವವೆಂದರೆ ಒಂದು ಭಾರಿ ಯಾಂತ್ರಿಕವ್ಯವಸ್ಥೆ; ಪರಿಪೂರ್ಣ ಹಾಗೂ ಸುವ್ಯವಸ್ಥಿತ. ಲಿವರ್, ಗೇರ್, ಮುಂತಾದವುಗಳನ್ನು ವಿವರಿಸುವಷ್ಟೇ ಸರಳವಾಗಿ, ಏನೂ ತೊಡಕಿಲ್ಲದಂತೆ ಈ ವ್ಯವಸ್ಥೆಯನ್ನು ವಿವರಿಸಲು ಸಾಧ್ಯ. ಆದರೆ ರೇಡಿಯೋ ವಿಕಿರಣ ಸಿದ್ಧಾಂತ, ಅದರ ಯಾಂತ್ರಿಕ ನಿಯಮಗಳಿಗೆ ಒಳಪಡದ ತತ್ತ್ವಗಳು, ಈ ಸುಂದರ ಕನಸನ್ನು ಇದ್ದಕ್ಕಿದ್ದಂತೆ ಒಡೆದುಹಾಕಿದವು. ವಿಜ್ಞಾನ ಜಗತ್ತಿನ ಕೇವಲ ಭೌತಿಕ ವಾದ ಸಕಾಲದಲ್ಲಿಯೇ ಮುರಿದುಬಿತ್ತು. ಭೌತಿಕನಿಯಮಗಳನ್ನು ಒಂದೊಂದಾಗಿ ಕೈಬಿಡಬೇಕಾಯಿತು. ಆದರೆ ನನಗೆ ತುಂಬ ಆಶ್ಚರ್ಯದ ಸಂಗತಿಯೆಂದರೆ: ಆಚಾರ್ಯ ಶಂಕರರಂತಹವರ ಆಲೋಚನಾವಿಧಾನವು, ಈ ಪಾಶ್ಚಾತ್ಯವಿಜ್ಞಾನಿಗಳು ಪಡೆದ ಹೊಸ ಜ್ಞಾನವನ್ನು ಸಂಪೂರ್ಣವಾಗಿ ಒಳಗೊಳ್ಳಬಲ್ಲದು ಎಂಬುದು. ವಿಜ್ಞಾನಿಗಳು....ಅವರಲ್ಲಿ ಕೆಲವರಾದರೂ ಈ ಪರಿವರ್ತನೆಗಳನ್ನು ಚೆನ್ನಾಗಿ ತಿಳಿದಿದ್ದಾರೆ. ಉದಾಹರಣೆಗೆ ಆರ್ಥರ್ ಎಡ್ಡಿಂಗ್‌ಟನ್ ಹೀಗೆನ್ನುತ್ತಾರೆ : "ನಮ್ಮ ಆತ್ಮಾನುಭವ ಸಿದ್ಧಾಂತವನ್ನು ಕೇವಲ ಭ್ರಮೆಯೆಂದು ನಾವು ತಿರಸ್ಕರಿಸಲಾರೆವು....ತರ್ಕಬದ್ಧ ಹಾಗೂ ನಿರ್ದಿಷ್ಟವಾದ ತತ್ವಗಳಿಂದ ಈಗಾಗಲೇ ಬಹುದೂರ ಬಂದುಬಿಟ್ಟದ್ದೇವೆ. ನಮ್ಮ ತತ್ತ್ವಶಾಸ್ತ್ರವಿಧಾನವೇ ಈಗ ಪರೀಕ್ಷೆಗೆ ಒಳಗಾಗಿದೆ." (Science and the unseen world- ವಿಜ್ಞಾನ ಮತ್ತು ಅಗೋಚರ ಪ್ರಪಂಚ).

ಭಾರತದೇಶವು ಈಗ ಪಾಶ್ಚಾತ್ಯವಿಜ್ಞಾನದಿಂದ ಬಹುವಾಗಿ ಪ್ರಯೋಜನ ಪಡೆಯುತ್ತಿದೆ. ಅದಕ್ಕೆ ಡಾ. ರಾಮನ್, ಡಾ. ಬೋಸ್, ಡಾ. ಚಂದ್ರಶೇಖರ್ ಮುಂತಾದ ಭಾರತೀಯ ವಿಜ್ಞಾನಿಗಳ ಕೊಡುಗೆಯೇನೂ ಕಡಿಮೆಯಲ್ಲ. ಇದು ಹೀಗೆಯೇ ಆಗತಕ್ಕದ್ದು. ಆದರೆ ಪಾಶ್ಚಾತ್ಯಜಗತ್ತೂ ಸಹ, ಗೌರೀಶಂಕರವನ್ನು ಏರಿದ ಏಕಾಂಗಿಸಾಹಸಿಗಳ ಸಾಧನೆಗೆ ಎಳ್ಳಷ್ಟೂ ಕಡಿಮೆಯಿಲ್ಲದ-ನಿಜಕ್ಕೂ ಹೆಚ್ಚಾದ ಭಾರತೀಯ ತತ್ತ್ವಶಾಸ್ತ್ರಜ್ಞರ ಸಿದ್ಧಾಂತಗಳ ಹಾಗೂ ಮಾನವಸ್ವಭಾವವನ್ನು ಕುರಿತು ರಹಸ್ಯಜಗತ್ತಿನಲ್ಲಿ ಅವರು ಮಾಡಿದ ಯಾತ್ರೆಯ ಫಲವನ್ನು ಪಡೆಯಲು ಆರಂಭಿಸಿದೆ. ನಿಮ್ಮ ವೇದಾಂತದ ಅನರ್ಘ್ಯನಿಧಿಯತ್ತ ನನ್ನ ದೇಶವಾದ ಅಮೆರಿಕೆಯ ಜನರು ಕಣ್ಣುಹಾಯಿಸುತ್ತಿದ್ದಾರೆ. (ಮುಗಿಯಿತು.)

ಪರಮಾತ್ಮಾಸಿ ವಿಷ್ಣುಸ್ತ್ವಂ ಮಾಯಾಮನುಜರೂಪಧೃಕ್ ।
ಅಂತಕಾಲೇಽಪಿ ದೃಷ್ಟ್ವಾ ತ್ವಾಂ ಮುಕ್ತೋಽಹಂ ರಘುಸತ್ತಮ ॥೩೨॥
ಹಸ್ತಾಭ್ಯಾಂ ಸ್ಪೃಶ ಮಾಂ ರಾಮ ಪುನರ್ಯಾಸ್ಯಾಮಿ ತೇ ಪದಮ್ ।
ತಥೇತಿ ರಾಮಃ ಪಸ್ಪರ್ಶ ತದಂಗಂ ಪಾಣಿನಾ ಸ್ಮಯನ್ ॥ ೩೩ ॥
ತತಃ ಪ್ರಾಣಾನ್ ಪರಿತ್ಯಜ್ಯ ಜಟಾಯುಃ ಪತಿತೋ ಭುವಿ ।

೩೨–೩೩. "ಮಾಯೆಯಿಂದ ಮನುಷ್ಯರೂಪವನ್ನು ಧರಿಸಿರುವ ನೀನು ವಿಷ್ಣುವೆಂಬ ಪರಮಾತ್ಮನಾಗಿರುವೆ. ಕೊನೆಗಾಲದಲ್ಲಿ ನಾನು ನಿನ್ನನ್ನು ಕಂಡು ಎಲೈ ರಘುಶ್ರೇಷ್ಠನೆ, (ನಾನು) ಮುಕ್ತನಾದೆನು. ಎರಡು ಕೈಗಳಿಂದಲೂ ಎಲೈ ರಾಮನೆ, ನೀನು ನನ್ನನ್ನು ಮುಟ್ಟು; ಮತ್ತೆ ನಿನ್ನ ಬಳಿಗೇ ಬರುವೆನು" ಎಂದನು. ಹಾಗೇ ಆಗಲೆಂದು ರಾಮನು ಮುಗುಳುನಗುತ್ತಾ ಅದರ ಶರೀರವನ್ನು ಮುಟ್ಟಿದನು. ಅನಂತರ ಜಟಾಯುವು ಪ್ರಾಣಗಳನ್ನು ಬಿಟ್ಟವನಾಗಿ ನೆಲದಮೇಲೆ ಬಿದ್ದನು.

ರಾಮಸ್ತಮನುಶೋಚಿತ್ವಾ ಬಂಧುವತ್ ಸಾಶ್ರುಲೋಚನಃ ।
ಲಕ್ಷ್ಮಣೇನ ಸಮಾನಾಯ್ಯ ಕಾಷ್ಠಾನಿ ಪ್ರದದಾಹ ತಮ್ ॥ ೩೪ ॥
ಸ್ನಾತ್ವಾ ದುಃಖೇನ ರಾಮೋಽಪಿ ಲಕ್ಷ್ಮಣೇನ ಸಮನ್ವಿತಃ ।
ಹತ್ವಾ ವನೇ ಮೃಗಂ ತತ್ರ ಮಾಂಸಖಂಡಾನ್ ಸಮಂತತಃ ॥ ೩೫ ॥
ಶಾದ್ವಲೇ ಪ್ರಾಕ್ಷಿಪದ್ ರಾಮಃ ಪೃಥಕ್ ಪೃಥಗನೇಕಧಾ ।
ಭಕ್ಷಂತು ಪಕ್ಷಿಣಃ ಸರ್ವೇ ತೃಪ್ತೋ ಭವತು ಪಕ್ಷಿರಾಟ್ ॥ ೩೬ ॥

೩೪–೩೬. ಕಣ್ಣೀರಿನಿಂದ ಕೂಡಿದ ರಾಮನು ತನ್ನ ನೆಂಟನಂತೆ ಆ (ಜಟಾಯುವನ್ನು) ಭಾವಿಸಿ ದುಃಖಪಟ್ಟು ಲಕ್ಷ್ಮಣನ ಮೂಲಕ ಸೌದೆಯನ್ನು ತರಿಸಿ ಅವನನ್ನು ದಹನಮಾಡಿದನು. ಅನಂತರ ಸ್ನಾನಮಾಡಿ ಲಕ್ಷ್ಮಣನೊಡಗೂಡಿ ಕಾಡಿನಲ್ಲಿ ಒಂದು ಮೃಗವನ್ನು ಕೊಂದು ಮಾಂಸಗಳನ್ನು ತುಂಡುಮಾಡಿ ದುಃಖದಿಂದ ಹಸಿರುಹುಲ್ಲಿನ ಮೈದಾನದಲ್ಲಿ ಬಿಡಿಬಿಡಿಯಾಗಿ ಬಹಳವಾಗಿ ಹರಡಿದನು. "ಇದೊ, ಹಕ್ಕಿಗಳೆಲ್ಲವೂ ಇದನ್ನು ತಿನ್ನಲಿ; ಪಕ್ಷಿರಾಜನ (ಆತ್ಮಕ್ಕೆ) ತೃಪ್ತಿಯಾಗಲಿ!" (ಎಂದನು).

ಇತ್ಯುಕ್ತ್ವಾ ರಾಘವಃ ಪ್ರಾಹ ಜಟಾಯೋ ಗಚ್ಛ ಮತ್ಪದಮ್ ।
ಮತ್ಸಾರೂಪ್ಯಂ ಭಜಸ್ವಾದ್ಯ ಸರ್ವಲೋಕಸ್ಯ ಪಶ್ಯತಃ ॥ ೩೭ ॥
ತತೋಽನನ್ತರಮೇವಾಸೌ ದಿವ್ಯರೂಪಧರಃ ಶುಭಃ ।
ವಿಮಾನವರಮಾರುಹ್ಯ ಭಾಸ್ವರಂ ಭಾನುಸನ್ನಿಭಮ್ ॥ ೩೮ ॥

೩೭–೩೮. ರಾಮನು ಹೀಗೆಂದು ಹೇಳಿ "ಎಲೈ ಜಟಾಯುವೆ, ನನ್ನ ಸ್ಥಾನವನ್ನು ಹೊಂದುವನಾಗು. ಪ್ರಪಂಚದವರೆಲ್ಲ ನೋಡುತ್ತಿರುವಂತೆಯೇ

ನನಗೆ ಸಮಾನವಾದ ರೂಪವನ್ನು ಪಡೆಯುವವನಾಗು" ಎಂದನು. ಹಾಗೆ ಹೇಳಿದ ಅನಂತರವೇ ಆತನು ಶುಭವಾದ ದಿವ್ಯವಾದ ರೂಪವನ್ನು ಹೊಂದಿದವನಾಗಿ ಸೂರ್ಯನಂತೆ ತೇಜಸ್ಸುಳ್ಳ ಹೊಳೆಯುತ್ತಿರುವ ಶ್ರೇಷ್ಠವಾದ ವಿಮಾನವನ್ನು ಹತ್ತಿದವನಾಗಿ—

ಶಂಖಚಕ್ರಗದಾಪದ್ಮಕಿರೀಟವರಭೂಷಣೈಃ ।
ದ್ಯೋತಯನ್ ಸ್ವಪ್ರಕಾಶೇನ ಪೀತಾಂಬರಧರೋಽಮಲಃ ॥ ೩೯ ॥
ಚತುರ್ಭಿಃ ಪಾರ್ಷದೈರ್ವಿಷ್ಣೋಃ ತಾದೃಶೈರಭಿಪೂಜಿತಃ ।
ಸ್ತೂಯಮಾನೋ ಯೋಗಿಗಣೈಃ ರಾಮಮಾಭಾಷ್ಯ ಸತ್ವರಃ ॥ ೪೦ ॥
ಕೃತಾಂಜಲಿಪುಟೋ ಭೂತ್ವಾ ತುಷ್ಟಾವ ರಘುನಂದನಮ್ ॥

೩೯–೪೦. ಶಂಖ-ಚಕ್ರ-ಗದೆ-ಕಮಲ-ಕಿರೀಟ-ಶ್ರೇಷ್ಠವಾದ (ಉಳಿದ) ಒಡವೆಗಳೇ ಮುಂತಾದವುಗಳಿಂದಲಂಕೃತನಾಗಿ ಪೀತಾಂಬರಧಾರಿಯಾಗಿ, ಶುಭ್ರನಾಗಿ ತನ್ನ ಕಾಂತಿಯಿಂದ ಎಲ್ಲವನ್ನೂ ಬೆಳಗುತ್ತಾ ವಿಷ್ಣುವಿನಂತೆಯೇ ಇರುವ ನಾಲ್ಕು ಜನ ಪರಿವಾರದವರಿಂದ ಸೇವಿಸಲ್ಪಟ್ಟವನಾಗಿ ಯೋಗಿಗಳಿಂದ ಸ್ತೋತ್ರ ಮಾಡಲ್ಪಡುತ್ತಾ ಶ್ರೀರಾಮನನ್ನು ಮಾತನಾಡಿಸಿ, ಕೈಮುಗಿದುಕೊಂಡು ರಘುನಂದನನಾದ (ರಾಮನನ್ನು) ಸೋತ್ರಮಾಡಿದನು.

ಜಟಾಯುರುವಾಚ—

ಅಗಣಿತಗುಣಮಪ್ರಮೇಯಮಾದ್ಯಂ
ಸಕಲಜಗತ್‌ಸ್ಥಿತಿಸಂಯಮಾದಿಹೇತುಮ್ ।
ಉಪರಮಪರಮಂ ಪರಾತ್ಮಭೂತಂ
ಸತತಮಹಂ ಪ್ರಣತೋಽಸ್ಮಿ ರಾಮಚಂದ್ರಮ್ ॥ ೪೧ ॥
ನಿರವಧಿಸುಖಮಿಂದಿರಾಕಟಾಕ್ಷಂ
ಕ್ಷಪಿತಸುರೇಂದ್ರಚತುರ್ಮುಖಾದಿದುಃಖಮ್ ।
ನರವರಮನಿಶಂ ನತೋಽಸ್ಮಿ ರಾಮಂ
ವರದಮಹಂ ವರಚಾಪಬಾಣಹಸ್ತಮ್ ॥ ೪೨ ॥

೪೧–೪೨. ಜಟಾಯುವಿಂತೆಂದನು : ಲೆಕ್ಕವಿಲ್ಲದಷ್ಟು ಕಲ್ಯಾಣಗುಣಗಳುಳ್ಳವನೂ ಪ್ರಮಾಣಗಳಿಗೆ ಅಗೋಚರನೂ ಆದ್ಯನೂ ಎಲ್ಲಾ ಪ್ರಪಂಚದ ಇರುವಿಕೆ, ನಾಶಾದಿಗಳಿಗೆ ಕಾರಣನಾದ ಪರಮಶಾಂತಸ್ವರೂಪನೂ ಪರಾತ್ಮನೂ ಆಗಿರುವ ರಾಮಚಂದ್ರನನ್ನು ನಾನು ಯಾವಾಗಲೂ ನಮಸ್ಕರಿಸುತ್ತೇನೆ.

ನಿರತಿಶಯಸುಖರೂಪನೂ ಲಕ್ಷ್ಮೀಕಟಾಕ್ಷಸಂಪನ್ನನೂ, ದೇವೇಂದ್ರ-ಬ್ರಹ್ಮಾದಿದೇವತೆಗಳ ದುಃಖವನ್ನು ನಾಶಗೊಳಿಸುವವನೂ ಪುರುಷಶ್ರೇಷ್ಠನೂ,

ಉತ್ತಮವಾದ ಧನುರ್ಬಾಣಗಳನ್ನು ಕೈಯಲ್ಲಿ ಹಿಡಿದಿರುವವನೂ ವರಪ್ರದನೂ ಆದ ರಾಮನನ್ನು ನಾನು ಯಾವಾಗಲೂ ನಮಸ್ಕರಿಸುವೆನು.

ತ್ರಿಭುವನಕಮನೀಯರೂಪಮೀಡ್ಯಂ
ರವಿಶತಭಾಸುರಮೀಹಿತಪ್ರದಾನಮ್ ।
ಶರಣದಮನಿಶಂ ಸುರಾಗಮೂಲೇ
ಕೃತನಿಲಯಂ ರಘುನಂದನಂ ಪ್ರಪದ್ಯೇ ॥ ೪೩ ॥

ಭವವಿಪಿನದವಾಗ್ನಿನಾಮಧೇಯಂ
ಭವಮುಖದೈವತದೈವತಂ ದಯಾಳುಮ್ ।
ದನುಜಪತಿಸಹಸ್ರಕೋಟಿನಾಶಂ
ರವಿತನಯಾಸದೃಶಂ ಹರಿಂ ಪ್ರಪದ್ಯೇ ॥ ೪೪ ॥

೪೩–೪೪. ತ್ರೈಲೋಕ್ಯಮೋಹನರೂಪವುಳ್ಳವನಾದ,-ಸ್ತುತ್ಯನಾದ, ನೂರು ಸೂರ್ಯರಿಗೆ ಸಮಾನವಾದ ಪ್ರಕಾಶವುಳ್ಳ, ಇಷ್ಟಾರ್ಥಗಳನ್ನು ಕೊಡುವವನಾದ, ಶರಣಾಗತರಿಗೆ ಗತಿಯಾದ, ಭಕ್ತಿಯುಳ್ಳವರ ಹೃದಯದಲ್ಲಿ ನೆಲೆಸಿರುವ ರಘುನಂದನನನ್ನು ಶರಣುಹೊಕ್ಕಿರುವೆನು.

ಸಂಸಾರವೆಂಬ ಕಾಡಿಗೆ ಕಾಡುಕಿಚ್ಚಿನ ರೂಪವಾಗಿರುವ, ಈಶ್ವರನೇ ಮೊದಲಾದ ದೇವತೆಗಳಿಗೂ ದೇವತೆಯಾದ, ದಯಾಳುವಾದ ಸಾವಿರಕೋಟಿ ರಾಕ್ಷಸರೊಡೆಯರನ್ನು ನಾಶಗೊಳಿಸಿದವನಾದ, ಸೂರ್ಯಪುತ್ರಿಯಾದ ಯಮುನಾ ದೇವಿಯಂತೆ ನೀಲವರ್ಣನಾದ ಶ್ರೀಹರಿಯನ್ನು ಶರಣುಹೊಂದುವೆನು.

ಅವಿರತಭವಭಾವನಾತಿದೂರಂ
ಭವವಿಮುಖೈರ್ಮುನಿಭಿಃ ಸದೈವ ದೃಶ್ಯಮ್ ।
ಭವಜಲಧಿಸುತಾರಣಾಂಘ್ರಿಪೋತಂ
ಶರಣಮಹಂ ರಘುನಂದನಂ ಪ್ರಪದ್ಯೇ ॥ ೪೫ ॥

ಗಿರಿಶಗಿರಿಸುತಾಮನೋನಿವಾಸಂ
ಗಿರಿವರಧಾರಿಣಮೀಹಿತಾಭಿರಾಮಮ್ ।
ಸುರವರದನುಜೇಂದ್ರಸೇವಿತಾಂಘ್ರಿಂ
ಸುರವರದಂ ರಘುನಾಯಕಂ ಪ್ರಪದ್ಯೇ ॥ ೪೬ ॥

೪೫–೪೬. ಸದಾಕಾಲವೂ ಪ್ರಾಪಂಚಿಕಚಿಂತೆಯಲ್ಲಿ ಮುಳುಗಿರುವವರಿಗೆ ದೂರನಾದ, ಸಂಸಾರದಿಂದ ಹಿಮ್ಮೆಟ್ಟಿದ ಮುನಿಗಳಿಂದ ಸದಾ ಕಾಣಲ್ಪಡುವ, ಸಂಸಾರಸಮುದ್ರವನ್ನು ದಾಟಲು ಉತ್ತಮವಾದ ತೆಪ್ಪದಂತಿರುವ ಪಾದಗಳುಳ್ಳ, ದೇವತೆಗಳಿಗೂ ವರಪ್ರದನಾದ ರಘುನಾಯಕನನ್ನು ಶರಣುಹೊಂದುವೆನು.

ಮಹಾದೇವ ಹಾಗೂ ಪಾರ್ವತಿಯರ ಮನಸ್ಸಿನಲ್ಲಿ ವಾಸಮಾಡುವ, (ಕೃಷ್ಣಾವತಾರದಲ್ಲಿ) ಬೆಟ್ಟವನ್ನು ಹಿಡಿದೆತ್ತಿರುವ, ಇಷ್ಟಾರ್ಥಗಳನ್ನು ಕೊಡುವ ದೇವಶ್ರೇಷ್ಠರಾದ ಇಂದ್ರಾದಿಗಳ ಹಾಗೂ ರಾಕ್ಷಸಶ್ರೇಷ್ಠರಾದ ಪ್ರಹ್ಲಾದಾದಿಗಳಿಂದ ಪೂಜಿಸಲ್ಪಟ್ಟ ಪಾದಗಳುಳ್ಳ ದೇವತೆಗಳಿಗೆ ವರಪ್ರದನಾದ ರಘುನಾಯಕನನ್ನು ನಾನು ಶರಣುಹೊಂದುವೆನು.

ಪರಧನಪರದಾರವರ್ಜಿತಾನಾಂ
ಪರಗುಣಭೂತಿಷು ತುಷ್ಟಮಾನಸಾನಾಮ್ ।
ಪರಹಿತನಿರತಾತ್ಮನಾಂ ಸುಸೇವ್ಯಂ
ರಘುವರಮಂಬುಜಲೋಚನಂ ಪ್ರಪದ್ಯೇ ॥ ೪೭ ॥

ಸ್ಮಿತರುಚಿರವಿಕಾಸಿತಾನನಾಬ್ಜಂ
ಅತಿಸುಲಭಂ ಸುರರಾಜನೀಲನೀಲಮ್ ।
ಸಿತಜಲರುಹಚಾರುನೇತ್ರಶೋಭಂ
ರಘುಪತಿಮೀಶಗುರೋರ್ಗುರುಂ ಪ್ರಪದ್ಯೇ ॥ ೪೮ ॥

೪೭–೪೮. ಮತ್ತೊಬ್ಬರ ಹಣ, ಸ್ತ್ರೀ–ಇವುಗಳನ್ನು ತ್ಯಾಗಮಾಡಿರುವ, ಹಾಗೂ ಮತ್ತೊಬ್ಬರ ಗುಣಗಳನ್ನು ಕಂಡು ಮನಸ್ಸಿನಲ್ಲಿ ಆನಂದಿಸುವ, ಮತ್ತೊಬ್ಬರಿಗೆ ಒಳ್ಳೆಯದನ್ನು ಮಾಡುವವರಿಂದ ಸೇವಿತನಾದ, ಕಮಲನಯನನಾದ ಶ್ರೀರಾಮನನ್ನು ಸೇವಿಸುತ್ತೇನೆ.

ಮುಗುಳುನಗೆಯಿಂದ ಅರಳಿದ ಮುಖಕಮಲವುಳ್ಳ, (ಭಕ್ತರಿಗೆ) ಅತಿ ಸುಲಭನಾದ, ಇಂದ್ರನೀಲಮಣಿಯಂತೆ ನೀಲವರ್ಣನಾಗಿರುವ, ಬಿಳುಪಾದ ತಾವರೆಯಂತೆ ಸುಂದರವಾದ ಕಣ್ಣುಗಳ ಕಾಂತಿಯುಳ್ಳ, ಮಹಾದೇವನಿಗೂ ಗುರುವಾದ ಶ್ರೀರಾಮನನ್ನು ಶರಣುಹೊಂದುವೆನು.

ಹರಿಕಮಲಜಶಂಭುರೂಪಭೇದಾತ್
ತ್ವಮಿಹ ವಿಭಾಸಿ ಗುಣತ್ರಯಾನುವೃತ್ತಃ ।
ರವಿರಿವ ಜಲಪೂರಿತೋದಪಾತ್ರೇ
ಷ್ವಮರಪತಿಸ್ತುತಿಪಾತ್ರಮೀಶಮೀಡೇ ॥ ೪೯ ॥

ರತಿಪತಿಶತಕೋಟಿಸುಂದರಾಂಗಂ
ಶತಪಥಗೋಚರಭಾವನಾವಿದೂರಮ್ ।
ಯತಿಪತಿಹೃದಯೇ ಸದಾ ವಿಭಾತಂ
ರಘುಪತಿಮಾರ್ತಿಹರಂ ಪ್ರಭುಂ ಪ್ರಪದ್ಯೇ ॥ ೫೦ ॥

೪೯-೫೦. ಎಲೈ (ರಾಮನೆ), ನೀನು ತ್ರಿಗುಣಗಳನ್ನು ಅನುಸರಿಸಿ ವಿಷ್ಣು-ಬ್ರಹ್ಮ-ಶಿವ- ಮುಂತಾದ ರೂಪಭೇದದಿಂದ ಕಂಡುಬರುತ್ತಿರುವೆ. ನೀರು ತುಂಬಿರುವ ಪಾತ್ರೆಗಳಲ್ಲಿ ಸೂರ್ಯನು ಪ್ರತಿಬಿಂಬಿಸಿರುವಂತೆ ನಾನಾರೂಪ ನಾಗಿರುವೆ. ಇಂಥ ನಿನ್ನನ್ನು ದೇವೇಂದ್ರನೂ ಹೊಗಳುತ್ತಿರುವನಾಗಿರುವದರಿಂದ ನಾನು ಸ್ತುತಿಸುವೆನು.

ಶತಕೋಟಿಮನ್ಮಥರನ್ನೂ ಮೀರಿದಂಥ ಸುಂದರಪುರುಷನಾದ, ನೂರಾರು ಮಾರ್ಗಗಳಲ್ಲಿ ನಡೆಯುವ (ಚಂಚಲಸ್ವಭಾವದವರಿಗೆ) ಎಂದೆಂದಿಗೂ ದೂರ ನಾಗಿರುವ, ಹಾಗೂ ಯತಿಶ್ರೇಷ್ಠರ ಹೃದಯದಲ್ಲಿ ಯಾವಾಗಲೂ ವಿರಾಜಿಸು ತ್ತಿರುವ, ಪ್ರಸನ್ನರನ್ನು ಕಾಪಾಡುವ ಪ್ರಭುವನ್ನು ಶರಣುಹೊಕ್ಕಿರುವೆನು.

ಇತ್ಯೇವಂ ಸ್ತುವತಃ ತಸ್ಯ ಪ್ರಸನ್ನೋಽಭೂತ್ ರಘೂತ್ತಮಃ ।
ಉವಾಚ ಗಚ್ಛ ಭದ್ರಂ ತೇ ಮಮ ವಿಷ್ಣೋಃ ಪರಂ ಪದಮ್ ॥ ೫೧ ॥
ಶೃಣೋತಿ ಯ ಇದಂ ಸ್ತೋತ್ರಂ ಲಿಖೇದ್ವಾ ನಿಯತಃ ಪಠೇತ್ ।
ಸ ಯಾತಿ ಮಮ ಸಾರೂಪ್ಯಂ ಮರಣೇ ಮತ್ಸ್ಮೃತಿಂ ಲಭೇತ್ ॥ ೫೨ ॥

೫೧-೫೨. ಹೀಗೆಂದು ಸ್ತುತಿಸುತ್ತಿರುವ ಆತನಿಗೆ ರಾಮನು ಪ್ರಸನ್ನ ನಾದನು. "ನಿನಗೆ ಒಳ್ಳೆಯದಾಗಲಿ, ವಿಷ್ಣುವಾದ ನನ್ನ ಪರಮಪದವಿಯನ್ನು ಹೊಂದುವನಾಗು ; ಈ ಸ್ತೋತ್ರವನ್ನು ಯಾವನು ಕೇಳುವನೋ, ಬರೆಯು ವನೋ, ಅಥವಾ ಪಠನಮಾಡುವನೋ ಅವನು ನನ್ನ ಸಾರೂಪ್ಯವನ್ನು ಹೊಂದುವನು. ಮತ್ತು ಸಾಯುವಾಗ ನನ್ನ ನೆನಪನ್ನು ಪಡೆಯುವನು.

ಇತಿ ರಾಘವಭಾಷಿತಂ ತದಾ
ಶ್ರುತವಾನ್ ಹರ್ಷಸಮಾಕುಲೋ ದ್ವಿಜಃ ।
ರಘುನಂದನಸಾಮ್ಯಮಾಸ್ಥಿತಃ
ಪ್ರಯಯೌ ಬ್ರಹ್ಮಸುಪೂಜಿತಂ ಪದಮ್ ॥ ೫೩ ॥

೫೩. ಈ ರೀತಿಯಾಗಿ ರಾಮನು ಆಗ ಹೇಳಲಾಗಿ ಪಕ್ಷಿಯು (ಜಟಾಯು ವು) ಸಂತೋಷಭರಿತನಾಗಿ ಅದನ್ನು ಕೇಳಿದನು. ಮತ್ತು ಶ್ರೀರಾಮನ ಸಮಾನತೆಯನ್ನು ಪಡೆದು ಬ್ರಹ್ಮನಿಂದ ಪೂಜಿಸಲ್ಪಟ್ಟ ಪರಮಪದವಿಗೆ ಹೋಗಿ ಸೇರಿದನು.

ಇತಿ ಶ್ರೀಮದಧ್ಯಾತ್ಮರಾಮಾಯಣೇ ಅರಣ್ಯಕಾಂಡೇ
ಅಷ್ಟಮಃ ಸರ್ಗಃ

———

# ಒಂಭತ್ತನೆಯ ಸರ್ಗ

ಶ್ರೀ ಮಹಾದೇವ ಉವಾಚ—

ತತೋ ರಾಮೋ ಲಕ್ಷ್ಮಣೇನ ಜಗಾಮ ವಿಪಿನಾಂತರಮ್ ।
ಪುನರ್ದುಃಖಂ ಸಮಾಶ್ರಿತ್ಯ ಸೀತಾನ್ವೇಷಣತತ್ಪರಃ ॥ ೧ ॥

೧. ಶ್ರೀ ಮಹಾದೇವನಿಂತೆಂದನು : ಅನಂತರ ರಾಮನು ಮತ್ತೆ ದುಃಖದಿಂದ ಕೂಡಿದವನಾಗಿ ಸೀತೆಯನ್ನು ಹುಡುಕುತ್ತಾ ಲಕ್ಷ್ಮಣನೊಡನೆ ಬೇರೊಂದು ಕಾಡಿಗೆ ಹೋದನು.

ತತ್ರಾದ್ಭುತಸಮಾಕಾರೋ ರಾಕ್ಷಸಃ ಪ್ರತ್ಯದೃಶ್ಯತ ।
ವಕ್ಷಸ್ಯೇವ ಮಹಾವಕ್ತ್ರಶ್ಚಕ್ಷುರಾದಿವಿವರ್ಜಿತಃ ॥ ೨ ॥
ಬಾಹೂ ಯೋಜನಮಾತ್ರೇಣ ವ್ಯಾಪೃತೌ ತಸ್ಯ ರಕ್ಷಸಃ ।
ಕಬಂಧೋ ನಾಮ ದೈತ್ಯೇಂದ್ರಃ ಸರ್ವಸತ್ತ್ವವಿಹಿಂಸಕಃ ॥ ೩ ॥

೨-೩. ಅಲ್ಲಿ ಹೊಟ್ಟೆಯಲ್ಲಿಯೇ ದೊಡ್ಡ ಬಾಯುಳ್ಳ ಹಾಗೂ ಕಣ್ಣು ಮುಂತಾದವುಗಳಿಲ್ಲದ ಅದ್ಭುತವಾದ ಆಕಾರವುಳ್ಳ ಒಬ್ಬ ರಾಕ್ಷಸನು ಕಾಣಿಸಿಕೊಂಡನು. ಆ ರಾಕ್ಷಸನ ತೋಳುಗಳೆರಡೂ ಯೋಜನದಷ್ಟು ದೂರ ಚಾಚಲ್ಪಟ್ಟಿದ್ದವು. ಅವನು ಎಲ್ಲಾ ಪ್ರಾಣಿಗಳನ್ನೂ ಹಿಂಸೆಮಾಡುವ ಕಬಂಧನೆಂಬ ಹೆಸರಿನ ರಾಕ್ಷಸಮುಖ್ಯನಾಗಿದ್ದನು.

ತದ್ಬಾಹ್ವೋರ್ಮಧ್ಯದೇಶೇ ತೌ ಚರಂತೌ ರಾಮಲಕ್ಷ್ಮಣೌ ।
ದದರ್ಶತುರ್ಮಹಾಸತ್ವಂ ತದ್ಬಾಹುಪರಿವೇಷ್ಟಿತೌ ॥ ೪ ॥
ರಾಮಃ ಪ್ರೋವಾಚ ವಿಹಸನ್ ಪಶ್ಯ ಲಕ್ಷ್ಮಣ ರಾಕ್ಷಸಮ್ ।
ಶಿರಃ ಪಾದವಿಹೀನೋಽಯಂ ಯಸ್ಯ ವಕ್ಷಸಿ ಚಾನನಮ್ ॥ ೫ ॥
ಬಾಹುಭ್ಯಾಂ ಲಭ್ಯತೇ ಯದ್ಯತ್ ತತ್ತದ್ ಭಕ್ಷನ್ ಸ್ಥಿತೋ ಧ್ರುವಮ್
ಆವಾಮಪ್ಯೇತಯೋರ್ಬಾಹ್ವೋರ್ಮಧ್ಯೇ ಸಂಕಲಿತೌ ಧ್ರುವಮ್ ॥

೪-೬. ಆ ರಾಕ್ಷಸನ ಎರಡು ತೋಳುಗಳ ನಡುವೆ ಸಂಚಾರಮಾಡುವಾಗ ಆ ರಾಮಲಕ್ಷ್ಮಣರು ಮಹಾಕಾಯನಾದ ಅವನ ತೋಳುಗಳಿಂದ ತಾವು ಸುತ್ತುವರಿಯಲ್ಪಟ್ಟಿರುವದನ್ನು ಕಂಡುಕೊಂಡರು. ರಾಮನು ನಗುತ್ತಾ ಲಕ್ಷ್ಮಣನನ್ನು ಕುರಿತು "ಎಲೈ ಲಕ್ಷ್ಮಣನೆ, ಈ ರಾಕ್ಷಸನನ್ನು ನೋಡು; ಇವನು ತಲೆ-ಕಾಲುಗಳಿಲ್ಲದವನಾಗಿರುವನು. ಹೊಟ್ಟೆಯಲ್ಲಿಯೇ ಮುಖವಿದೆ. ಎರಡು ತೋಳುಗಳಿಂದ ಏನೇನು ದೊರೆಯುವದೋ ಅದದನ್ನು ತಿಂದುಕೊಂಡು ಈತನಿದ್ದಾನೆ. ಈಗ ನಾವುಗಳೂ ಈತನ ಎರಡು ತೋಳುಗಳ ನಡುವೆ ಕೂಡಿಹಾಕಲ್ಪಟ್ಟಿರುವೆವು. ಇದು ನಿಜ.

ಗಂತುಮನ್ಯತ್ರ ಮಾರ್ಗೋ ನ ದೃಶ್ಯತೇ ರಘುನಂದನ ।
ಕಿಂ ಕರ್ತವ್ಯಮಿತೋಽಸ್ಮಾಭಿರಿದಾನೀಂ ಭಕ್ಷಯೇತ್ ಸ ನೌ ॥ ೭ ॥
ಲಕ್ಷ್ಮಣಸ್ತಮುವಾಚೇದಂ ಕಿಂ ವಿಚಾರೇಣ ರಾಘವ ।
ಆವಾಮೇಕೈಕಮವ್ಯಗ್ರೌ ಛಿಂದ್ಯಾವ ರಕ್ಷೋಭುಜೌ ಧ್ರುವಮ್ ॥ ೮ ॥
ತಥೇತಿ ರಾಮಃ ಖಡ್ಗೇನ ಭುಜಂ ದಕ್ಷಿಣಮುಚ್ಛಿನತ್ ।
ತಥೈವ ಲಕ್ಷ್ಮಣೋ ವಾಮಂ ಚಿಚ್ಛೇದ ಭುಜಮಂಜಸಾ ॥ ೯ ॥

೭-೯. "ಎಲೈ ರಘುನಂದನನೆ, ಬೇರೆಲ್ಲಿಗೂ ಹೋಗಲು ದಾರಿಯಿರುವದಿಲ್ಲ. ಈಗ ನಾವು ಮಾಡಬೇಕಾದದ್ದಾದರೂ ಏನು ? ಅವನು ನಮ್ಮಿಬ್ಬರನ್ನೂ ತಿಂದುಬಿಡುವನಲ್ಲ! (ಎಂದನು). ಆಗ ಅವನನ್ನು ಕುರಿತು ಲಕ್ಷ್ಮಣನು 'ರಾಮ, ಈಗ ವಿಚಾರಮಾಡುವದರಿಂದೇನು ಪ್ರಯೋಜನ ? ನಾವಿಬ್ಬರೂ ಕೂಡಿ ಈ ರಾಕ್ಷಸನ ಎರಡು ತೋಳುಗಳನ್ನೂ ಕತ್ತರಿಸೋಣ' (ಎಂದನು). ಹಾಗೇ ಆಗಲೆಂದು ರಾಮನು ಕತ್ತಿಯಿಂದ ಬಲಭುಜವನ್ನೂ ಲಕ್ಷ್ಮಣನು ಎಡಭುಜವನ್ನೂ ಕೂಡಲೆ ಕತ್ತರಿಸಿದರು.

ತತೋಽತಿವಿಸ್ಮಿತೋ ದೈತ್ಯಃ ಕೌ ಯುವಾಂ ಸುರಪುಂಗವೌ ।
ಮದ್ಬಾಹುಚ್ಛೇದಕೌ ಲೋಕೇ ದಿವಿ ದೇವೇಷು ವಾ ಕುತಃ ॥ ೧೦ ॥
ತತೋಽಬ್ರವೀದ್ಧಸನ್ನೇವ ರಾಮೋ ರಾಜೀವಲೋಚನಃ ।

೧೦. ಅನಂತರ ಬಹಳ ಆಶ್ಚರ್ಯಗೊಂಡ ರಾಕ್ಷಸನು "ನೀವು ಯಾವ ದೇವತಾಶ್ರೇಷ್ಠರು ? ನನ್ನ ತೋಳುಗಳನ್ನು ಕತ್ತರಿಸಿದ ನೀವು ದೇವಲೋಕದವರೊ, ಈ ಲೋಕದವರೊ ? ಹೇಗೆ ?" ಎಂದನು. ಕಮಲನೇತ್ರನಾದ ರಾಮನು ಆಗ ನಗುತ್ತಲೇ ಹೀಗೆಂದನು :

ಅಯೋಧ್ಯಾಧಿಪತಿಃ ಶ್ರೀಮಾನ್ ರಾಜಾ ದಶರಥೋ ಮಹಾನ್ ।
ರಾಮೋಽಹಂ ತಸ್ಯ ಪುತ್ರೋಽಸೌ ಭ್ರಾತಾ ಮೇ ಲಕ್ಷ್ಮಣಃ ಸುಧೀಃ ॥
ಮಮ ಭಾರ್ಯಾ ಜನಕಜಾ ಸೀತಾ ತ್ರೈಲೋಕ್ಯಸುಂದರೀ ।
ಆವಾಂ ಮೃಗಯಯಾ ಯಾತೌ ತದಾ ಕೇನಾಪಿ ರಾಕ್ಷಸಾ ॥ ೧೧ ॥
ನೀತಾಂ ಸೀತಾಂ ವಿಚಿನ್ವಂತೌ ಚಾಗತೌ ಘೋರಕಾನನೇ ।
ಬಾಹುಭ್ಯಾಂ ವೇಷ್ಟಿತಾವತ್ರ ತವ ಪ್ರಾಣರಿರಕ್ಷಯಾ ॥ ೧೨ ॥
ಛಿನ್ನೌ ತವ ಭುಜೌ ತ್ವಂ ಚ ಕೋ ವಾ ವಿಕಟರೂಪಧೃಕ್ ।

೧೧-೧೨. "ಅಯೋಧ್ಯೆಯ ಒಡೆಯನಾದ ಮಹಾತ್ಮನೂ ಶ್ರೀಮಂತನೂ ಆದ ದಶರಥನೆಂಬವನ ಮಗನಾದ ರಾಮನೆಂಬವನು ನಾನು. ಬುದ್ಧಿಶಾಲಿಯಾದ ಈ ಲಕ್ಷ್ಮಣನು ನನ್ನ ಸೋದರನು. ಮೂರು ಲೋಕಕ್ಕೂ ಸುಂದರಿಯೆನಿಸಿದ ಜನಕನ ಮಗಳಾದ ಸೀತೆಯು ನನ್ನ ಹೆಂಡತಿಯು. ನಾವಿಬ್ಬರೂ

ಬೇಟೆಗಾಗಿ ಹೋಗಿದ್ದ ಕಾಲದಲ್ಲಿ ಯಾವನೋ ಒಬ್ಬ ರಾಕ್ಷಸನು ಸೀತೆಯನ್ನು ಒಯ್ದನಾದ್ದರಿಂದ ಆಕೆಯನ್ನು ಹುಡುಕುತ್ತಾ ಈ ಭಯಂಕರವಾದ ಅರಣ್ಯಕ್ಕೆ ಬಂದೆವು. ನಿನ್ನ ತೋಳುಗಳಿಂದ ಸುತ್ತುವರೆಯಲ್ಪಟ್ಟೆವು. ಪ್ರಾಣವನ್ನು ಕಾಪಾಡಿಕೊಳ್ಳುವ ಸಲುವಾಗಿ ನಿನ್ನ ತೋಳುಗಳನ್ನು ಕತ್ತರಿಸಲಾಯಿತು. ನೀನಾದರೋ, ವಿಕಾರವಾದ ದೇಹವುಳ್ಳವನಾಗಿರುವೆಯಲ್ಲವೆ ? ನೀನು ಯಾರು?

ಕಬಂಧ ಉವಾಚ—

ಧನ್ಯೋಽಹಂ ಯದಿ ರಾಮಸ್ತ್ವಮಾಗತೋಽಸಿ ಮಮಾಂತಿಕಮ್ ।
ಪುರಾ ಗಂಧರ್ವರಾಜೋಽಹಂ ರೂಪಯೌವನದರ್ಪಿತಃ ॥೧೪॥
ವಿಚರಲ್ಲೋಕಮಖಿಲಂ ವರನಾರೀಮನೋಹರಃ ।
ತಪಸಾ ಬ್ರಹ್ಮಣೋ ಲಬ್ಧಮವಧ್ಯತ್ವಂ ರಘೂತ್ತಮ ॥೧೫॥

೧೪-೧೫. ಕಬಂಧನಿಂತೆಂದನು : ನನ್ನ ಸಮೀಪಕ್ಕೆ ಬಂದಿರುವ ನೀನು ರಾಮನಾದರೆ ನಾನು ಧನ್ಯನಾದೆನು. ಹಿಂದೆ ಗಂಧರ್ವರಾಜನಾಗಿದ್ದ ನಾನು ಪ್ರಾಯ ಹಾಗೂ ರೂಪಮದದಿಂದ ಕೊಬ್ಬಿದವನಾಗಿ ಶ್ರೇಷ್ಠರಾದ ಸ್ತ್ರೀಯರಿಗೆಲ್ಲ ಮನೋಹರನಾಗಿದ್ದುಕೊಂಡು ಎಲ್ಲಾ ಲೋಕಗಳನ್ನೂ ಸಂಚರಿಸಿದೆನು. ಎಲೈ ರಘುಶ್ರೇಷ್ಠನೆ, ತಪಸ್ಸಿನ ಮಹಿಮೆಯಿಂದ ನನಗೆ ಬ್ರಹ್ಮನಿಂದ ಸಾಯದೆ ಇರುವಂಥ ವರವು ದೊರಕಿತ್ತು.

ಅಷ್ಟಾವಕ್ರಂ ಮುನಿಂ ದೃಷ್ಟ್ವಾ ಕದಾಚಿದಹಸಂ ಪುರಾ ।
ಕ್ರುದ್ಧೋಽಸಾವಾಹ ದುಷ್ಟ ತ್ವಂ ರಾಕ್ಷಸೋ ಭವ ದುರ್ಮತೇ ॥೧೬॥
ಅಷ್ಟಾವಕ್ರಃ ಪುನಃ ಪ್ರಾಹ ವಂದಿತೋ ಮೇ ದಯಾಪರಃ ।
ಶಾಪಸ್ಯಾಂತಂ ಚ ಮೇ ಪ್ರಾಹ ತಪಸಾ ದ್ಯೋತಿತಪ್ರಭಃ ॥೧೭॥
ತ್ರೇತಾಯುಗೇ ದಾಶರಥಿರ್ಭೂತ್ವಾ ನಾರಾಯಣಃ ಸ್ವಯಮ್ ।
ಆಗಮಿಷ್ಯತಿ ತೇ ಬಾಹೂ ಛಿಂದ್ಯೇತೇ ಯೋಜನಾಯತೌ ॥೧೮॥
ತೇನ ಶಾಪಾದ್ವಿನಿರ್ಮುಕ್ತೋ ಭವಿಷ್ಯಸಿ ಯಥಾ ಪುರಾ ।
ಇತಿ ಶಪ್ತೋಽಹಮದ್ರಾಕ್ಷಂ ರಾಕ್ಷಸೀಂ ತನುಮಾತ್ಮನಃ ॥೧೯॥

೧೬-೧೯. ಒಮ್ಮೆ ನಾನು ಅಷ್ಟಾವಕ್ರನೆಂಬ ಋಷಿಯನ್ನು ಕಂಡು ನಕ್ಕೆನು. ಕುಪಿತನಾದ ಆತನು "ಎಲೈ ದುಷ್ಟನೆ, ದುರ್ಬುದ್ಧಿಯುಳ್ಳವನೆ, ನೀನು ರಾಕ್ಷಸನಾಗು" ಎಂದನು. ಅನಂತರ ನನ್ನಿಂದ ನಮಸ್ಕರಿಸಲ್ಪಟ್ಟ ಹಾಗೂ ತಪಸ್ಸಿನಿಂದ ಬೆಳಗಿದ ಕಾಂತಿಯುಳ್ಳ ದಯಾಪರನಾದ ಆತನು ನನಗೆ ಈ ಶಾಪದ ಕೊನೆಯನ್ನು ಹೇಳಿದನು. ಏನೆಂದರೆ 'ತ್ರೇತಾಯುಗದಲ್ಲಿ ಶ್ರೀಮನ್ನಾರಾಯಣನು ತಾನೇ ದಶರಥಪುತ್ರನಾಗಿ ಹುಟ್ಟಿಬರಲಿದ್ದಾನೆ. ಯೋಜನದಷ್ಟು ಉದ್ದವಾದ ನಿನ್ನ ತೋಳುಗಳೆರಡೂ [ಅವನಿಂದ] ಕತ್ತರಿಸಲ್ಪಡುವವು. ಅದರಿಂದ

ಮುದ್ರಣಾಲಯದ ನಿಧಿಗೆ : ಶ್ರೀ|| ಎಲ್.ಜಿ. ದೇಸಾಯಿಯವರು, ಬೆಂಗಳೂರೆ ರೂ. ೨೫೦ ;

ವಿದ್ಯಾರ್ಥಿ ಖಾತೆಗೆ : ಶ್ರೀ|| ಎಲ್. ಜಿ. ದೇಸಾಯಿಯವರು, ರೂ. ೩೯ ;

ಪೂಜಾಮಂದಿರ ನಿಧಿಗೆ : ಶ್ರೀಗಳಾದ ಕೆ.ಎನ್. ದತ್ತಾತ್ರಿಯವರು, ಅರಸೀಕೆರೆ, ರೂ. ೫ ; ಯಾದಾಳಂ ವಂಶೀಕರು ರೂ. ೧೫ ; ಶ್ರೀಮತಿ ಪ್ರೇಮಲತಾ ರಾಮಶೇಷ್‌ರವರು, ರೂ. ೧೦ ; ಒಟ್ಟು ರೂ. ೩೦ ;

ಸಂನ್ಯಾಸಿಗಳ ಸತ್ಕಾರನಿಧಿಗೆ : ಶ್ರೀಮತಿ ಕೆ. ವಿ. ಲಲಿತಾಂಬಾರವರು, ಹೊಳಲ್ಕೆರೆ. ರೂ. ೧೦ ;

ಗುರುಮಂದಿರ ನಿಧಿಗೆ : ಯಾದಾಳಂ ವಂಶೀಕರು ರೂ. ೧೦ ;

ಮೇಲ್ಕಂಡ ಮಹಾಶಯರುಗಳಿಗೆಲ್ಲ ನಮ್ಮ ಕೃತಜ್ಞತಾಪೂರ್ವಕವಾದ ಅಭಿನಂದನೆಗಳನ್ನು ಈ ಮೂಲಕ ಸಮರ್ಪಿಸುವೆವು.

---

## ಶಾಖಾಕಾರ್ಯಾಲಯದ ಸುದ್ದಿ

(ಬೆಂಗಳೂರು ಶಾಖಾ ಕಾರ್ಯದರ್ಶಿಗಳಿಂದ)

ಶ್ರೀಶ್ರೀಗಳವರು : ಪೂಜ್ಯ ಶ್ರೀ ಜ್ಞಾನಾನಂದೇಂದ್ರಸರಸ್ವತೀಮಹಾಸ್ವಾಮಿಗಳವರು ಚಾತುರ್ಮಾಸ್ಯವು ಪೂರೈಸುವವರೆಗೂ ಬೆಂಗಳೂರಿನಲ್ಲಿಯೇ ಇರುತ್ತಾರೆ. ಶ್ರೀಶ್ರೀಗಳವರು ಆರೋಗ್ಯವಾಗಿದ್ದು ಎಂದಿನಂತೆ ತಮ್ಮ ಆಧ್ಯಾತ್ಮಿಕ ಸಾಧನೆಗಳಲ್ಲಿ ನಿರತರಾಗಿದ್ದಾರೆ.

ಪಾಠಪ್ರವಚನಗಳು : ಸುಮಾರು ಇಪ್ಪತ್ತು ಜನ ಶ್ರೋತೃಗಳು ಹಾಜರಾಗುತ್ತಿರುವ ವೇದಾಂತ ತರಗತಿಗೆ ಗೀತಾಭಾಷ್ಯ ಪಾಠವನ್ನು ಆರಂಭಿಸಲಾಗಿದೆ.

ಪುರಾಣ : ಉಪನ್ಯಾಸಗಳು: ಗುರುಚರಿತ್ರೆ ಪುರಾಣವೂ ಪೂಜ್ಯ ಶ್ರೀಗಳವರಿಂದ ಬೃಹದಾರಣ್ಯಕೋಪನಿಷತ್ ಪ್ರವಚನಗಳೂ ಮುಂದುವರಿದಿವೆ.

ಬೆಂಗಳೂರಿನ ವಿವಿಧ ವೇದಿಕೆಗಳಲ್ಲಿ ಆಗಾಗ್ಗೆ ಶ್ರೀ ಸುಬ್ರಾಯಶರ್ಮರು ನೀಡುತ್ತಿರುವ ವೇದಾಂತೋಪನ್ಯಾಸಗಳು ಜನಪ್ರಿಯವಾಗಿ ಮುಂದುವರಿದಿವೆ.

ಅನುಷ್ಠಾನಗಳು : ಶ್ರೀರಾಮನವರಾತ್ರಿ ಅನುಷ್ಠಾನವು ಯಶಸ್ವಿಯಾಗಿ ನೆರವೇರಿತು. ಶಂಕರಸಪ್ತಾಹದ ಕಾರ್ಯಕ್ರಮಗಳನ್ನು ಪ್ರತ್ಯೇಕವಾಗಿ ಲಗತ್ತಿಸಿದೆ. ಇಷ್ಟವುಳ್ಳವರು ಭಾಗವಹಿಸಬಹುದು.

ಪ್ರದೋಷಪೂಜೆ : ಕಳೆದ ನಾಲ್ಕು ತಿಂಗಳಿನಿಂದಲೂ ನಡೆಯುತ್ತಿರುವ ಪ್ರದೋಷಪೂಜೆಯು ಭಕ್ತರ ಉತ್ಸಾಹದಿಂದ ಕಳೆಗಟ್ಟುತ್ತಿದೆ. ಆಶ್ರಮದ ಉಳಿದ ಎಲ್ಲಾ ಕಾರ್ಯಕ್ರಮಗಳೂ ಪುರೋಭಿವೃದ್ಧಿಯ ಹಾದಿಯಲ್ಲಿವೆ.

---

ADHYATMA-PRAKASHA Regd. No. KRN-I-5

Registered with the Registrar of News-papers for India under No. R. N. 13244/57

## ಕೇಳಿರಿ

ನಾಮರೂಪಾತ್ಮಕವಾದ ಜಗತ್ತೆಲ್ಲವೂ ಅನೃತವೇ ಆಗಿದೆ. ಇದಕ್ಕೆ ಆಧಾರವಾಗಿರುವ ಬ್ರಹ್ಮವು ಸತ್ಯವಾಗಿದೆ. ಅದು ನಮ್ಮ ಆತ್ಮನೇ ಆಗಿದ್ದು ಹೃದಯಗೋಚರವಾಗಿದೆ. ಯಾವನು ತನ್ನ ಹೃದಯದಲ್ಲಿ ಈ ಸತ್ಯಬ್ರಹ್ಮವನ್ನು ಅದರ ಮೂರು ಅಕ್ಷರಗಳನ್ನೂ ವಿಶ್ಲೇಷಿಸಿ "ಸ-ಯ-ಗಳ ನಡುವಿನ 'ತ್' ಎಂಬಿದು ಅನೃತವಾಗಿದ್ದು ಎರಡು ಕಡೆಯಲ್ಲೂ ನಿಜದಿಂದ ವ್ಯಾಪ್ತವಾಗಿದೆ" ಎಂದು ಚಿಂತಿಸುವನೋ ಅವನೇ ಸತ್ಯೋಪಾಸಕನು. ಅಂಥವನಿಗೆ ನಿರ್ಜೀವವಾದ ಅನೃತವು ಏನೂ ಮಾಡಲಾರದು. ಅನೃತವೂ ಸತ್ಯದಲ್ಲಿಯೇ ಪ್ರವಿಲಯವಾಗುವದರಿಂದ ಅಂಥವನು ಸತ್ಯಬ್ರಹ್ಮದಲ್ಲಿಯೇ ನೆಲೆಗೊಳ್ಳುವನು.

To.

Sri




M 414 Sri J. Sreenivasa
Murthy, No. 18, II Cross
Kodanda Rampuram
P.O. BANGALORE-3

Edited Printed & Published by H. S. Lakshminarasimha Murthy as Secretary for The Adhyatma Prakasha Karyalaya, At The Adhyatma Prakasha Press, Holenarsipur - 573211

6-5-1981.